ಶ್ರೀ

ಏಕನಾಥೀ

# ಹಂಸಗೀತೆ.


ಲೇಖಕ ಹಾಗು ಪ್ರಕಾಶಕ:—

ಯ. ಗು. ಕುಲಕರ್ಣಿ,

ಎಡಿಟರ, ಸ. ಚ , ಆನಂದವನ.



(ಪ್ರಥಮ ಮುದ್ರಣ.)

೧೯೨೯

ಬೆಲೆ ೬ ಆಣೆ.



## ಶ್ರೀ ಏಕನಾಥೀ ಭಾಗವತ

# ಹಂಸಗೀತೆ.



### ಶ್ರೀಕೃಷ್ಣ ಸಂಭಾಷಣ.

("ಸೂಕ್ಷ್ಮಯೋಗಗತಿ" ಹಾಗು "ದುರ್ಜ್ಞೇಯ ಸ್ವರೂಪ ಸ್ಥಿತಿ"
ಈ ವಿಷಯಗಳ ಬಗ್ಗೆ ಸನಕಾದಿಕರು ಮಾಡಿದ ಪ್ರಶ್ನೆ)




ಸತ್ಯಲೋಕವೇ ಮೊದಲಾದ ಮೂರೂ ಲೋಕಗಳಲ್ಲಿ ಮಹಾ ಪ್ರಸಿದ್ಧರೂ, ಬ್ರಹ್ಮನ ಮಾನಸಪುತ್ರರೂ ಆದ ಸನಕಾದಿಕರು ಸತ್ಯಲೋಕದಲ್ಲಿ ಬ್ರಹ್ಮದೇವರನ್ನು ಕುರಿತು ಅತಿ ದುಸ್ತರವೂ, ಗಹನವೂ ಆದ ಪ್ರಶ್ನೆಗಳನ್ನು ಕೇಳಿದರು. ಆ ಪ್ರಶ್ನೋಕ್ತಿಗಳು ಮುಖ್ಯವಾಗಿ ಎರಡು ಇದ್ದವು. ಅವು ಯಾವವೆಂದರೆ:—(೧) ಅತಿ ಸೂಕ್ಷ್ಮವಾದ ಯೋಗಗತಿ (೨) ದುರ್ಜ್ಞೇಯವಾದ ಸ್ವಸ್ವರೂಪಸ್ಥಿತಿ.

### ಸನಕಾದಿಕರ ಪ್ರಶ್ನೆ.

(ವಿಷಯದಲ್ಲಿ ಚಿತ್ತವೂ, ಚಿತ್ತದಲ್ಲಿ ವಿಷಯವೂ ಇರುವಾಗ
ಅನ್ಯೋನ್ಯ ತ್ಯಾಗವು ಹ್ಯಾಗೆ ಆಗುವದು?)

ಸನಕಾದಿಕರು:—"ವಿಷಯಗಳಲ್ಲಿ ಚಿತ್ತವು ಸ್ವಾಭಾವಿಕ ಪ್ರೇಮದಿಂದ ಸತತವಾಗಿ ಪ್ರವೇಶಮಾಡಿ, ಅವುಗಳಲ್ಲಿಯೇ ಮುಳುಗಿ ಹೋಗಿ ವಿಷಯಾಸಕ್ತ

ವಾಗುವದು. ಇದು ಚಿತ್ತದ ಸ್ವಭಾವವು. ಇದರಂತೆ, ವಿಷಯಗಳು ಚಿತ್ತದಲ್ಲಿ ಪ್ರವೇಶಮಾಡಿ, ವಾಸನಾರೂಪದಿಂದ ಅದರಲ್ಲಿಯೇ ಆಸಕ್ತವಾಗಿ, ಅದನ್ನು (ಚಿತ್ತವನ್ನು) ಬಿಟ್ಟು ಬರಲಾರವು. ಫಲ, ಕಾಲ ಇವೆರಡು ಇಲ್ಲದಿದ್ದರೂ ಮಾವಿನ ಹಣ್ಣುಗಳು ಮಧುರವಾಗಿಯೇ ಇರುವವು. ಇದೇ ಪ್ರಕಾರ ವಿಷಯಗಳಗಳು ಚಿತ್ತದಲ್ಲ ಒಮ್ಮೆ ಪ್ರವೇಶ ಮಾಡಿದವೆಂದರೆ, ಅವು ಅದನ್ನು ಬಿಟ್ಟು ಎಂದಿಗೂ ಹೊರಹೊರಡುವದಿಲ್ಲ ವಿವಾಹಿತಳಾದ ಸ್ತ್ರೀಯಳಲ್ಲಿ ತನ್ನ ತವರು ಮನೆಗೆ ಹೋಗಬೇಕೆಂಬ ವಾಸನೆಯು ಒಮ್ಮೆ ಹುಟ್ಟಿತೆಂದರೆ, ಆ ವಾಸನೆಯು ಚಿತ್ತದಲ್ಲಿ ಕೂಡಲೆ ಸೇರುವದು. ಅವಳ ತವರು ಮನೆಯು ಎಷ್ಟು ದೂರದಲ್ಲಿದ್ದರೂ, ಅವಳು ಅಲ್ಲಿಗೆ ಹೋಗದೇ ಬಿಡಳು. ಇದರಂತೆ, ಚಿತ್ತದಲ್ಲಿ ವಿಷಯ ಒಮ್ಮೆ ವಾಸನಾರೂಪದಿಂದ ಪ್ರವೇಶವಾಗಿ ಆಸಕ್ತವಾದವೆಂದರೆ, ಅವು ಅದನ್ನು ಬಿಟ್ಟು ಬರಲಾರವು. ಹೀಗೆ ಚಿತ್ತಕ್ಕೂ, ವಿಷಯಗಳಿಗೂ ಅನ್ಯೋನ್ಯ ಸಂಬಂಧವಿರುವದರಿಂದ, ಚಿತ್ತವು ವಿಷಯಗಳನ್ನು ಬಿಡುವ ಬಗೆಹ್ಯಾಗೆ? ಹಾಗು ವಿಷಯಗಳು ಚಿತ್ತವನ್ನು ಬಿಡುವದೆಂತು? ಮುಮುಕ್ಷುಗಳಿಗೆ ಈ ವಿಷಯ ಚಿತ್ತಗಳ ಅನ್ಯೋನ್ಯತ್ಯಾಗವು ಹ್ಯಾಗೆ ಸಂಭವಿಸುವದು? ಇವುಗಳ ಪರಸ್ಪರ ತ್ಯಾಗಕ್ಕೆ ಮುಮುಕ್ಷುಗಳು ಯಾವ ಉಪಾಯವನ್ನು ಯೋಜಿಸಬೇಕು?'' ಎಂದು ಕೇಳಿದರು.

## ಬ್ರಹ್ಮದೇವನ ಕರ್ಮಜಾಡ್ಯತೆ.

ತನ್ನ ಮಾನಸ ಪುತ್ರರು ಮಾಡಿದ ಪ್ರಶ್ನಗಳಿಗೆ ಮಹಾದೇವನಾದ ಬ್ರಹ್ಮನೂಸಹ ಯೋಗ್ಯವಾದ ಸಮಂಜಸ ಉತ್ತರವನ್ನು ಕೊಡಲು ಅಸಮರ್ಥನಾದನು. ಬ್ರಹ್ಮದೇವನಿಗೆ ಮಹಾದೇವನೆಂಬ ಹೆಸರು ಹ್ಯಾಗೆ ಬಂದಿತೆಂಬದನ್ನು ಕೇಳಿರಿ. ಬ್ರಹ್ಮದೇವನಿಗೆ ಸಕಲ ದೇವತೆಗಳಲ್ಲಿ ಅಗ್ರಪೂಜೆಯು ಸನ್ಮಾನವಿದ್ದು, ಅವನ ಮಹಿಮೆಯು ಎಲ್ಲ ದೇವತೆಗಳಿಗೂ ಮಿಗಿಲಾದದ್ದು. ಇವನು ಚರಾಚರಸೃಷ್ಟಿಯ ಉತ್ಪಾದಕ ಪ್ರಮೋದಗಳ ನಿಜವಾದ ಮಂದಿರನೂ ಇರುವನು ಇಂಥ ಬ್ರಹ್ಮದೇವನಿಗೂ ಕೂಡ ಸನಕಾದಿಕರ ಪ್ರಶ್ನಗಳಿಗೆ ನಿಶ್ಚಿತವಾದ ಸಮರ್ಪಕವಾದ ಉತ್ತರವನ್ನು ಹ್ಯಾಗೆ ಕೊಡಬೇಕೆಂಬದು ತಿಳಿಯದಾಯಿತು. ಅವನ ಬುದ್ಧಿಯು ಕರ್ಮದಿಂದ ಜಡವಾಗಿದ್ದಿತು. ಬೋಧಮಾಡುವ ಶಕ್ತಿಯು ಅವನಲ್ಲಿ ಸ್ಫುರಣಹೊಂದಲಿಲ್ಲ. ಈ ಸಿದ್ಧಿಯ ಕೊರತೆಯು ಅವನಲ್ಲಿ ಇದ್ದಿತು. ಅದರೊಳಗೂ ಪ್ರಶ್ನಗಳು ಅತ್ಯಂತ ಗಹನವಾಗಿದ್ದವು. ಇದರಿಂದ ಬ್ರಹ್ಮನಿಗೆ

ಯೋಗ್ಯವಾದ ಉತ್ತರವನ್ನು ಕೊಡಲಿಕ್ಕೆ ಮತಿಗಾಣದೆ, ಹುಚ್ಚು ಹಿಡಿದಂತಾಯಿತು. ಅವನ ಮುಖದಿಂದ ವಾಣಿಗಳೇ ಹೊರ ಹೊರಡದಂತಾದವು. ಆಗ ಕಿಂಕರ್ತವ್ಯತಾ ಮೂಢನಾದ ಬ್ರಹ್ಮನು ನನ್ನನ್ನು (ಭಗವಂತನಾದ ಸಾಕ್ಷಾತ್ ನಾರಾಯಣನನ್ನು) ಧ್ಯಾನ ಮಾಡತೊಡಗಿದನು. ಸತ್ಯಲೋಕದಲ್ಲಿ ಸಮಸ್ತ ದೇವಮುನಿ ಸನಕಾದಿಗಳು ಕುಳಿತುಕೊಂಡಾಗ ಅವರ ಸಮಕ್ಷಮವಾಗಿ ಸನಕಾದಿ ಋಷಿಗಳ ಪ್ರಶ್ನಗಳಿಗೆ ಉತ್ತರವನ್ನು ಕೊಡುವದು ತನಗೆ ತಿಳಿಯದು, ಅದು ತನ್ನಿಂದಾಗದು, ಎಂದು ಬ್ರಹ್ಮದೇವನು ಹೇಳಲಾರದವನಾದನು; ಆ ಪ್ರಶ್ನಗಳಿಗೆ ಉತ್ತರವನ್ನು ಹೇಳಲಿಕ್ಕೆ ಹೋದರೆ, ಬ್ರಹ್ಮದೇವನಿಗೆ ಕರ್ಮಜಾಡ್ಯತೆಯಿಂದ ಬೋಧಶಕ್ತಿಯೂ ಬಾರದಂತಾಗಿ ಅವನ ಮುಖದಿಂದ ಸಮಂಜಸವಾದ ವಾಣಿಗಳೂ ಹೊರಡದಂತಾದವು. ಹೀಗೆ ಬ್ರಹ್ಮನಿಗೆ ದುರ್ಘಟವಾದ ಸ್ಥಿತಿಯು ಪ್ರಾಪ್ತವಾಯಿತು. ಅವನು ಸ್ಪಷ್ಟವಾಗಿ ಮಾತನಾಡದಾದನು ಬ್ರಹ್ಮದೇವನು ಈ ತನ್ನ ಪರಮ ಸಂಕಟವನ್ನರಿತು, ಜ್ಞಾನವರಿಷ್ಠನಾದ ನನ್ನನ್ನು (ನಾರಾಯಣನನ್ನು) ಧ್ಯಾನ ಮಾಡಿದನು.

## ಹಂಸರೂಪದಿಂದ ಸತ್ಯಲೋಕಕ್ಕೆ ಸಾಕ್ಷಾತ್ ವಿಷ್ಣುವಿನ ಆಗಮನ.

ತನ್ನ ಮಾನಸಪುತ್ರರಾದ ಸನಕಾದಿಕರ ಅಜ್ಞಾನವನ್ನು ನಿರಸನ ಮಾಡುವದಕ್ಕೂ ಅವರ ಪ್ರಶ್ನೆಗಳಿಗೆ ಸ್ಪಷ್ಟವಾಗಿ ಉತ್ತರವನ್ನು ಕೊಟ್ಟು ತಾನು ಪಾರಾಗುವದಕ್ಕೂ ಬ್ರಹ್ಮನು ವಿಷ್ಣುವಿನ ಧ್ಯಾನವನ್ನು ಮಾಡಲು, ಆಗ ಆ ಭಗವಂತನ ಮನಸ್ಸು ದಯೆಯಿಂದ ಕಳವಳಗೊಂಡಿತು. 'ಬ್ರಹ್ಮನು ನನ್ನ ಹೊಟ್ಟೆಯ ಮಗನು. ಅವನು ನನ್ನ ಬಾಲಕನು. ಕರ್ಮಜಾಡ್ಯತೆಯಿಂದ ಅವನ ಕಣ್ಣಿನ ಮೇಲೆ ಆವರಣವು (ಪಡದೆ) ಬಂದಿದ್ದರಿಂದ, ಅವರ (ಸನಕಾದಿಕರ) ಪ್ರಶ್ನೆಗಳಿಗೆ ಉತ್ತರವನ್ನು ಕೊಡಲು ಅವನಿಗೆ ಅಸಾಧ್ಯವಾಯಿತು,' ಎಂದು ಆಲೋಚಿಸಿ, ಭಗವಂತನು ಕೂಡಲೆ ಬ್ರಹ್ಮದೇವನ ಅಜ್ಞಾನದೃಷ್ಟಿಯನ್ನು ನಿರಸನ ಮಾಡುವದಕ್ಕಾಗಿ, ಹಂಸಸ್ವರೂಪವನ್ನು ತಾಳಿದನು. ಸನಕಾದಿಕರು ಬ್ರಹ್ಮನಿಗೆ ಮಾಡಿದ ಪ್ರಶ್ನೆಗಳು ಅತಿ ಹನವಾಗಿದ್ದು ಪರಮಹಂಸರ, ಪರಮಸಾರವಾಗಿರುವವು. ಈ ಪ್ರಶ್ನರೂಪೀ ಸಮುದ್ರವನ್ನು ದಾಟುವದು ಬ್ರಹ್ಮನಿಗೆ ಅಶಕ್ಯವಾಗಿದ್ದಿತು. ಬ್ರಹ್ಮನನ್ನು ಈ ಸಮುದ್ರದ ಆಚೆಯ ದಂಡೆಗೆ ಕರಕೊಂಡು ಹೋಗಿ

ಸನಕಾದಿಕರಿಗೆ ಸ್ಪಷ್ಟವಾದ ಉತ್ತರವನ್ನು ಕೊಡುವದಕ್ಕಾಗಿ ಭಗವಂತನು ಹಂಸ ರೂಪ ಧರಿಸುವನೆಂತಲೂ ಹೇಳಬಹುದು.

ಶ್ರೀ ಭಗವಂತನು:—"ಭಕ್ತಶ್ರೇಷ್ಠನಾದ ಉದ್ಧವನೇ, ನಾನು ವಸ್ತುತಃ ನಿರ್ಗುಣನಿದ್ದು ನನ್ನ ಆಕಾರವೂ, ವರ್ಣವೂ ಯಾರಿಗಾದರೂ ಅಗೋಚರ ವಾಗಿಯೇ ಇರುವವು. ಇಂಥ ಅವ್ಯಕ್ತನೂ, ಸ್ವಪ್ರಕಾಶನೂ ಆದ ನಾನು ಬ್ರಹ್ಮಪುತ್ರರಾದ ಸನಕಾದಿಕರಿಗೆ ಜ್ಞಾನೋಪದೇಶ ಮಾಡುವದಕ್ಕೆ ಶ್ವೇತ ವರ್ಣನೂ, ದಿವ್ಯ ತೇಜೋಮಯನೂ, ರಾಜಹಂಸನೂ ಆದೆನು. ಸೃಷ್ಟಿ ಯನ್ನು ಹುಟ್ಟಿಸುವ ಬ್ರಹ್ಮದೇವನು, ಸೃಷ್ಟಿಯನ್ನೇ ಹುಟ್ಟಿಸುವ ಕಾರ್ಯ ದಲ್ಲಿಯೇ ಯಾವಾಗಲೂ ಆಸಕ್ತನಾಗಿರುವದರಿಂದ, ಅವನ ಬುದ್ಧಿಯು ಕರ್ಮ ಜಡವಾಗಿದೆ. ಅವನು ನಿಜ ಜ್ಞಾನಸಿದ್ಧಿಯನ್ನು ಮರೆತುಬಿಟ್ಟಿರುವನು. ಯಾವಾ ತನು ತಾನು ಕರ್ಮಾಧಿಕಾರಿಯೆಂದು (ಕರ್ಮಗಳನ್ನು ಆಚರಿಸಲಿಕ್ಕೆ ಅಧಿಕಾರ ವುಳ್ಳವನೆಂದು) ಅನ್ನುವನೋ, ಅವನಲ್ಲಿ ಆ ಕೂಡಲೆ ದೇಹಬುದ್ಧಿಯೂ, ಅಹಂ-ಕಾರವೂ ಪ್ರವೇಶವಾಗಿ, ಅವನು ದೇಹಾತ್ಮದೃಷ್ಟಿಯುಳ್ಳವನಾಗುವನು. ಪರ ಮಾರ್ಥದ ನಗರದಲ್ಲಿ ಇಂಥ ದೇಹಬುದ್ಧಿಯು ಕರ್ಮಠನಿಗೆ ಪ್ರವೇಶವಿರುವ ದಿಲ್ಲ. ಇಂಥ ಕರ್ಮಜಡನಿಗೆ ದೇಹಬುದ್ಧಿಯ ಯೋಗದಿಂದ ಬಾಹ್ಯಮುದ್ರೆ ಗಳಲ್ಲಿಯೇ (ಕರ್ಮಗಳ ಬಹಿರಾಡಂಬರ ಲಕ್ಷಣಗಳಲ್ಲಿಯೇ) ನಿಶ್ಚಯವಿರುವದು. ಪರಮಾರ್ಥದಲ್ಲಿ ಅವನ ನಿಶ್ಚಯವಿರುವದಿಲ್ಲ. 'ನಕರ್ಮಣಾ ನ ಪ್ರಜಯಾ' (ಅಮೃತತ್ವವು ಅಂದರೆ ಮೋಕ್ಷವು ಅಥವಾ ಬ್ರಹ್ಮಸ್ಥಿತಿಯು ಕರ್ಮದಿಂದಲೂ ಇಲ್ಲ. ಪ್ರಜೆ (ಪುತ್ರ) ಗಳಿಂದಲೂ ಇಲ್ಲ. (ಸಿಗುವದಿಲ್ಲ") ಎಂಬ ವೇದೋ ಕ್ತಿಯು ಕರ್ಮಗಳ ನಿಷೇಧವನ್ನು ಮಾಡಿ, ಕರ್ಮಗಳನ್ನು ತ್ಯಾಗಮಾಡಲು ಹೇಳುವದು. ಶ್ರುತಿಗಳೂ ಕೂಡ ನಿಷೇಧಮಾಡಿದ ಕರ್ಮಗಳಿಂದ ಬ್ರಹ್ಮಸ್ಥಿತಿ ಪ್ರಾಪ್ತಿಯು ಆಗುವದೆಂದು ಪ್ರತಿಪಾದಿಸುವ ನರರು ಅಜ್ಞಾನಿಗಳೇ ಸರಿ. ನಾನು ಬ್ರಹ್ಮದೇವನಿಗೆ ಎಷ್ಟೋಸಾರೆ ಬ್ರಹ್ಮಜ್ಞಾನವನ್ನುಪದೇಶ ಮಾಡಿದರೂ, ಅವನಿಗೆ ಕಡೆಗೆ ಕರ್ಮಜಡತ್ವವು (ಕರ್ಮಠತನದಿಂದ ಉಂಟಾಗುವ ಬುದ್ಧಿ ಮಾಂದ್ಯವು) ಬಂದಿತು. ಕೇವಲ ಕರ್ಮಗಳಲ್ಲಿಯೇ ಆಸಕ್ತನಾಗಿರುವ ಕರ್ಮಠ ನಿಗೆ ಮುಕ್ತಿಯು ಹ್ಯಾಗೆ ಸಿಗಬೇಕು? ಮೂರು ಲೋಕಗಳಲ್ಲಿಯೂ ಅದೃಷ್ಟ ದ್ರಷ್ಟಾ (ಕಾಣದೆ ಇರುವದನ್ನು ಸಹ ನೋಡುವವನು, ತಿಳಿಯುವವನು) ಎಂದು ಪ್ರಖ್ಯಾತಿಯನ್ನು ಹೊಂದಿದ ಬ್ರಹ್ಮದೇವನಂಥವನೂ ಸಹ ಕರ್ಮ

ಜಾಡ್ಯದಿಂದ, ವಿಷಯಗಳಲ್ಲಿ ಆಸಕ್ತನಾಗಿರುವನು. ಅಂದಬಳಿಕ ಇತರರ ಪಾಡೇನು? ಸುಜ್ಞಾನಿಗಳೂ ಸಹ ಈ ಕರ್ಮಗಳಿಗೂ ವಿಷಯಗಳಿಗೂ ಮರುಳಾಗಿ ಅವುಗಳ ವಶದಲ್ಲಿ ಸಿಕ್ಕು, ಅವುಗಳಿಂದ ವಂಚಿಸಲ್ಪಡುವರು. ಬ್ರಹ್ಮನ ಮಾನಸ ಪುತ್ರರ ಪ್ರಶ್ನಗಳಿಗೆ, ಅವರಿಗೆ ಸಮಾಧಾನವಾಗುವ ಹಾಗೆ, ಸ್ಪಷ್ಟವಾದ ಉತ್ತರವನ್ನು ಹೇಳುವ ಪ್ರಸಂಗದಲ್ಲಿ ಅನಾಯಾಸವಾಗಿ ಬ್ರಹ್ಮನಿಗೂ ಬ್ರಹ್ಮೋಪ ದೇಶವಾಗಿ ಅವನಲ್ಲಿ ನಿಜಜ್ಞಾನವು ವಿಕಸಿತವಾಗುವದು. ಇಂಥ ಸಮಯವನ್ನೇ ಸಾಧಿಸಿ, ನಾನು ಸತ್ಯಲೋಕಕ್ಕೆ ಹಂಸರೂಪಧರನಾಗಿ ಬಂದೆನು.

ನಾನು ಅಲ್ಲಿ ಹೋದ ಕಾಲದಲ್ಲಿ ಸನಕಾದಿಕರು ಪ್ರಶ್ನಕರ್ತೃ ಗಳಾಗಿದ್ದರು. ಸತ್ಯಲೋಕದ ಒಡೆಯನಾದ ಬ್ರಹ್ಮದೇವನೇ ಉತ್ತರ ಹೇಳುವ ವನಾಗಿ ಕುಳಿತಿದ್ದನು. ಇತ್ತ ಸನಕಾದಿಕರಿಗೂ 'ಅತಿ ಸೂಕ್ಷ್ಮಯೋಗ ಗತಿ' 'ದುರ್ಜ್ಞೇಯ ಸ್ವಸ್ವರೂಪಸ್ಥಿತಿ' ಇವುಗಳ ಬಗ್ಗೆ ಪೂರ್ಣಜ್ಞಾನವಿದ್ದರೂ ಅವರ ಮನಸ್ಸು ಸಂಶಯದಲ್ಲಿ ಸಿಕ್ಕು ಈ ತತ್ವವನ್ನು ಹ್ಯಾಗೆ ತಿಳಿದುಕೊಳ್ಳಬೇಕೆಂಬ ಸಂಕಟದಲ್ಲಿದ್ದರು. ಮತ್ತು ಇತ್ತ ಮಾನಸಪುತ್ರರ ಈ ಪರಮ ಕಠಿಣವೂ ಗಹ ನವೂ ಆದ ಪ್ರಶ್ನೆಗಳಿಗೆ ಉತ್ತರವನ್ನು ಕೊಡಲಿಕ್ಕೆ ಬ್ರಹ್ಮದೇವನಿಗೆ ಮತಿಯು ಪ್ರಕಾಶವಾಗಲಿಲ್ಲ. ಅವನಿಗೂ ಕರ್ಮಜಾಡ್ಯದಿಂದ ಅಜ್ಞಾನವು ಮುಸುಕಿತ್ತು. ಇಂಥ ಎರಡೂ ಪಕ್ಷಗಳಿಗೆ ಸಂಕಟವು ಬಿದ್ದಾಗ ನಾನು ಅಲ್ಲಿಗೆ ಹೋದೆನು. ನೀರನ್ನೂ, ಹಾಲನ್ನೂ ಕೂಡಿಸಿ ಆ ಮಿಶ್ರಣವನ್ನು ಹಂಸಪಕ್ಷಿಯ ಎದುರಿಗಿಟ್ಟರೆ ಈ ಮಿಶ್ರಣದೊಳಗಿಂದ ಅದು ಹಾಲನ್ನೂ, ನೀರನ್ನೂ ಕೆಡಿಸದೆ ಶುದ್ಧ ಹಾಲನ್ನೇ ಬೇರೆ ಮಾಡುವದು. ಶುದ್ಧ ನೀರನ್ನೇ ಬೇರೆ ಮಾಡುವದು. ಅದರಂತೆ, ಸಾರವನ್ನೂ, ಅಸಾರವನ್ನೂ ಬೇರೆ ಬೇರೆ ಮಾಡಿ ವಿಂಗಡಿಸಿಡುವದಕ್ಕಾಗಿ, ಜ್ಞಾನಚತುರನಾದ ನಾನು ರಾಜಹಂಸರ ಪಿನಾಗಿ ಬಂದೆನು. ಚಿತ್ತವೂ ವಿಷ ಯಗಳೂ ಪರಸ್ಪರವಾಗಿ ಒಂದರಲ್ಲಿ ಒಂದು ಕೂಡಿ ಹೋಗಿರುವವು. ಆದರೆ ಈ ಚಿತ್ತ ವಿಷಯಗಳ ಮಿಶ್ರಣದೊಳಗಿಂದ ಚಿತ್ತವನ್ನೇ ಬೇರೆ, ವಿಷಯಗಳನ್ನೇ ಬೇರೆ ವಿಂಗಡಿಸಿಡುವದಕ್ಕಾಗಿ ನಾನು ಹಂಸರೂಪಧರನಾಗಿ ಬಂದೆನು. ಸತ್ಯ ಲೋಕದಲ್ಲಿ ಯಾರ ಆಗಮನವಾದರೂ ಪೂರ್ವ ಪುಣ್ಯ ಸಂಚಯವಿಲ್ಲದೆ ಎಂದಿಗೂ ಆಗುವದಿಲ್ಲ. ಮತ್ತು ವಿಮಾನದ ಹೊರತು ಯಾರಾದರೂ ಸರ್ವಥೈವ ಸತ ಲೋ ಕಕ್ಕೆ ಹೋಗಲಾರರು; ಆದರೆ ನಾನು ಪೂರ್ವಪುಣ್ಯಸಂಚಯವಿಲ್ಲದೆ ವಿಮಾನವಿಲ್ಲದೆ ಸತ್ಯಲೋಕಕ್ಕೆ ಗಮನ ಮಾಡಿದೆನು. ನಾನು ಪುಣ್ಯಪಾಪಾತೀತನಾಗಿರುವೆನು.

ನನಗೆ ಪುಣ್ಯವೂ ಇಲ್ಲ, ಹಾಗು ಪಾಪಬಾಧೆಯೂ ಇರುವದಿಲ್ಲ. ಉದ್ಧವನೇ, ನಾನು ಪಕ್ಕಗಳಿಂದಲೋ ಅಥವಾ ಪಾದಚಾರಿಯಾಗಿ ನಡೆಯುತ್ತಲೋ ಸತ್ಯಲೋಕಕ್ಕೆ ಬಂದೆನೆಂದು, ನಿನ್ನಲ್ಲಿ ಸಂದೇಹವು ಹುಟ್ಟಿರಬಹುದು. ನಾನು 'ಸರ್ವಗತ'ನಾಗಿದ್ದು ಸರ್ವತ್ರದಲ್ಲಿಯೂ ಇರುವೆನು. ನಾನು ಹಂಸಸ್ವರೂಪದಿಂದ ಸತ್ಯಲೋಕಕ್ಕೆ ಒಮ್ಮಿಂದೊಮ್ಮೆಲೆ ಬಂದದ್ದನ್ನು ನೋಡಿ, ಅಲ್ಲಿದ್ದ ಎಲ್ಲರಿಗೂ ಪರಮಾಶ್ಚರ್ಯವಾಯಿತು.

## ಸತ್ಯಲೋಕದಲ್ಲಿ ಹಂಸರೂಪಧರ ಭಗವಂತನಿಗೆ ಆದ ಸನ್ಮಾನವೂ, ಸನಕಾದಿಕರ ಪ್ರಶ್ನವೂ.

ಪರಬ್ರಹ್ಮನೂ, ಪರಮ ಚಿದ್ಘನ ಮೂರ್ತಿಯೂ ಆದ ನಾನು ಹಂಸಸ್ವರೂಪ ಸ್ಥಿತಿಯಲ್ಲಿ ಸತ್ಯಲೋಕಕ್ಕೆ ಬಂದ ಕೂಡಲೆ, ಎಲ್ಲರೂ ತಮ್ಮ ಆಸನಗಳಿಂದ ಎದ್ದು ನನ್ನನ್ನು ಎದುರ್ಗೊಂಡು, ನನ್ನ ಚರಣಗಳಿಗೆ ಸಾಷ್ಟಾಂಗ ವಂದನೆ ಮಾಡಿದರು. ಬ್ರಹ್ಮಲೋಕದಲ್ಲಿ ವೇದಗಳು ಮೂರ್ತಿಮಂತವಾಗಿದ್ದವು ಪುಣ್ಯವಾದರೂ ಮೂರ್ತಿಮಂತವಾಗಿದ್ದಿತು. ಸತ್ಯಲೋಕದಲ್ಲಿ ಸತ್ಯ ತಪ ಇವೇ ಮೊದಲಾದವುಗಳೆಲ್ಲ ಮೂರ್ತಿಮಂತವಾಗಿದ್ದವು. ಬ್ರಹ್ಮದೇವನ ಸುತ್ತುಮುತ್ತು ನೆರೆದ ಸಭಿಕರ ಎದುರಿಗೆ ಬ್ರಹ್ಮನು 'ನೀವು ಯಾರು?' ಎಂದು ಕೇಳಲು, ತನಗೆ ಅಜ್ಞಾನದ ಆರೋಪವು (ಬ್ರಹ್ಮದೇವನು ಎಷ್ಟು ಅಜ್ಞಾನಿಯಾಗಿರುವನು? ತಾನು ದೊಡ್ಡ ದೇವನಿದ್ದು, ಬಂದವರಿಗೆ ನೀನು ಯಾರು? ಎಂದು ಕೇಳುವನು? ಎಂಬ ಅಜ್ಞಾನದ ಆರೋಪವು) ಬರುವದೆಂಬ ಹೆದರಿಕೆಯಿಂದ ಅವನು ಮೌನವ ತಾಳಿ, ಸುಮ್ಮನೆ ನಿಂತನು. ಬ್ರಹ್ಮನನ್ನು ಮುಂದೆ ಮಾಡಿಕೊಂಡು ಸನಕಾದಿಕರು ನನಗೆ 'ನೀವು ಯಾರು?' ಎಲ್ಲಿಯವರು? ಎಂದು ಪ್ರಶ್ನ ಮಾಡಿದರು. ಬಳಿಕ ಆ ಚತುರರೂ ತತ್ವಾರ್ಥವನ್ನು ತಿಳಿದುಕೊಳ್ಳಲು ಅಪೇಕ್ಷಿಸುವವರೂ ಆದ ಆ ಮುನಿಗಳು ತತ್ವಾರ್ಥವನ್ನು ತಿಳಿದುಕೊಳ್ಳುವದಕ್ಕಾಗಿ ತಾವು ಮೊದಲು ಬ್ರಹ್ಮದೇವನಿಗೆ ಕೇಳಿದ ಪ್ರಶ್ನವನ್ನು ನನಗೇ (ಭಗವಂತನಿಗೇ) ಕೇಳಿದರು. ಅದಕ್ಕೆ ನಾನು ಅವರಿಗೆ:-"ಸ್ಥೂಲ, ಸೂಕ್ಷ್ಮ (ಲಿಂಗ) ಕಾರಣಗಳೆಂಬ ಮೂರು ಶರೀರಗಳಿಂದಲೂ ಆಚೆಗೆ ಅಲಿಪ್ತವಾಗಿ ಚಿದ್ಘನನಾದ ಪರಬ್ರಹ್ಮ ವಸ್ತುವು ಇರುವದು" ಎಂದು ಸವಿಸ್ತರವಾಗಿಯೂ, ಸ್ಪಷ್ಟವಾಗಿಯೂ ಬೋಧ ಮಾಡಿ, ಅವರ ಪ್ರಶ್ನ ಖಂಡನವನ್ನು ಮಾಡಿ, ಅವರಿಗೆ ನಿತ್ಯಾ-ನಿತ್ಯ ವಿವೇಕ ಜ್ಞಾನವನ್ನು ತಿಳಿಸಿ ಹೇಳಿದೆನು. ಉದ್ಧವನೇ, ಅದೇ ನಿರೂಪಣವನ್ನೇ ನಾನು ಈಗ ನಿನಗೋಸ್ಕರ ಹೇಳುವೆನು.

## ಹಂಸ ಸ್ವರೂಪಿ ಪರಮಾತ್ಮನ ಸಂಭಾಷಣ.

(ಆತ್ಮನು ಅದ್ವೈತನಾಗಿಯೂ, ದೇಹವು ಪಂಚಭೂತಾತ್ಮಕವಾಗಿಯೂ ಇರುವದರಿಂದ ಪ್ರಶ್ನೆಯು ಅಯುಕ್ತತೆ.)

ಪರಮಾತ್ಮನು ಒಬ್ಬನೇ ಒಬ್ಬನಿರುವನು. ಅಲ್ಲಿ 'ನಾನು, ನೀನು' ಎಂಬ ದ್ವೈತದ ಪ್ರವೇಶವೇ ಇರುವದಿಲ್ಲ. 'ನೀನು ಯಾರು' ಎಂದು ನೀವು ಮಾತಾಡುವ ಮಾತು ವ್ಯರ್ಥವಾಗಿದ್ದು, ಅದು ಕೇವಲ ವಾಚಾಲತ್ವದ ಬಡಬಡಿಕೆಯಿರುವದು. ನೀವು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವದಕ್ಕೆ ವಕ್ತಾರನಿಗೆ (ಉತ್ತರವನ್ನು ಹೇಳುವ ಬೋಧಕನಿಗೆ) ಆಶ್ರಯುವೇ ಇರುವದಿಲ್ಲ; ಹಾಗು ಅವನಿಗೆ 'ನಾನು' 'ನೀನು' ಎಂಬದು ಕಾಣುವದೇ ಇಲ್ಲ. ನೀವು ತಿಳಿಯದೇ ಅಜ್ಞಾನದಿಂದ ನನಗೆ ಪ್ರಶ್ನವನ್ನು ಮಾಡಿದಿರಿ ನಿಜ; ಆದರೆ ತಿಳಿದವನಾದ ನಾನು ನಿಮಗೆ ಏನು ಹೇಳಬೇಕು? ಮೂಲತಃ 'ನಾನು, ನೀನು' ಎಂಬ ದ್ವೈತವೇ ಇರುವದಿಲ್ಲ. ಆದ್ದರಿಂದ, ನೀವು ಮಾಡಿದ ಪ್ರಶ್ನವೇ ಮಿಥ್ಯವಾಗಿರುವದು. ಚಿದ್ಘನನಾದ ಪರಮಾತ್ಮನಿಗೆ ನಾಮ, ರೂಪ, ವರ್ಣ, ಆಕಾರಗಳೇ ಇರುವದಿಲ್ಲ. ಮತ್ತು ಸ್ವಜಾತಿ, ವಿಜಾತಿಗಳೆಂಬ ಭೇದವೂ ಇರುವದಿಲ್ಲ. ಮುನಿಗಳೇ, ನಿಮ್ಮ ಪ್ರಶ್ನವು ಸತ್ಯವಾದದ್ದಲ್ಲ 'ಬ್ರಾಹ್ಮಣ' ಎಂಬ ಶಬ್ದವನ್ನು ನುಡಿದರೇ ನಾಲ್ಕು ಪುರುಷಾರ್ಥಗಳು ಪೂರ್ಣವಾಗುವವು, ಎಂದು ಬ್ರಾಹ್ಮಣ ಶಬ್ದದ ಪರಮ ಖ್ಯಾತಿಯು ಸರ್ವತ್ರದಲ್ಲಿರುವದು ಆದ್ದರಿಂದ ಇಂಥ ಜ್ಞಾನಿಗಳಾದ ನಿಮ್ಮಲ್ಲಿ ಜ್ಞಾನದ (ವಿಷಯವಾದ) ಪ್ರಶ್ನೋಕ್ತಿಯು ನಿಶ್ಚಯವಾಗಿ ಸಂಭವಿಸುವದಿಲ್ಲ (ನಿಮ್ಮಂಥ ಪ್ರಾಣಿಗಳು ಇಂಥ ಪ್ರಶ್ನವನ್ನು ಮಾಡಬಾರದು) ಆತ್ಮನಲ್ಲಿ) ಅನೇಕತ್ವವಾಗಲಿ, ಭೇದವಾಗಲಿ ಇರುವದಾದರೆ, 'ನೀನು ಯಾರು' ಎಂಬ ಪ್ರಶ್ನವು ಉಂಟಾಗುವದು. ಆತ್ಮನಲ್ಲಿ (ವಿಷಯದಲ್ಲಿ) ಇಂಥ ಪ್ರಶ್ನವು ಎಂದಿಗೂ ಸಂಭವಿಸಲಾರದು. ಇರಲಿ, ಆತ್ಮನ ವಿಷಯದಲ್ಲಿ ಇಂಥ ಪ್ರಶ್ನವು ಸಂಭವಿಸದಿದ್ದರೂ, ದೇಹದ ವಿಷಯದಲ್ಲಾದರೂ ಸಂಭವಿಸಬಹುದೆಂದು ನೀವು ಅಂದರೆ, ದೇಹದ ವಿಷಯದಲ್ಲಿ ಎಲ್ಲಾದರೂ ಈ ತರದ ಪ್ರಶ್ನವನ್ನು ಯೋಜಿಸಲಿಕ್ಕೆ ಬರುವದಿಲ್ಲ ಬ್ರಹ್ಮನನ್ನು ಮೊದಲು ಮಾಡಿಕೊಂಡು ಒಂದು ಕ್ಷುಲ್ಲಕ ನೊರಜಿನಂಥ ಹುಳದವರೆಗೆ ಇರುವ ದೇಹಗಳೆಲ್ಲ ಪಂಚಭೂತಾತ್ಮಕವಾಗಿರುವವು. ಅಲ್ಲಿ 'ನೀನು ಯಾರು' ಎಂದು ಕೇಳುವದಕ್ಕೆ, ಈ ದೇಹಗಳಿಗಿಂತ ಭಿನ್ನ ವಸ್ತುವೇ ಕಾಣುವದಿಲ್ಲ. ಬಂಗಾರದಿಂದ ಮಾಡಿದ ಕಟಕ (ಕೈಯೊಳಗಿನ

ಬಳೆ ಮೊದಲಾದವುಗಳು,) ಕಿವಿಗಳಲ್ಲಿಯು ಕುಂಡಲಾಲಂಕಾರಗಳು, ಬಂಗಾರದ ಮುಂಕುರೆ-ಮಾಲೆಗಳು, ಬಂಗಾರದ ಉಂಗುರ-ಪಟ್ಟಿಗಳು ಇವೇ ಮೊದಲಾದ ಬಂಗಾರದ ಅಲಂಕಾರಗಳನ್ನು ನೋಡಿದರೆ, ಇವುಗಳಲ್ಲಿ ಬಂಗಾರದ ಹೊರ್ತು ಎರಡನೆಯದಾವದೂ ಕಾಣುವದಿಲ್ಲ. ಪ್ರತಿಯೊಂದು ಅಲಂಕಾರದಲ್ಲಿ ಬಂಗಾರದ ಅಂಶವು ಇದ್ದೇ ಇರುವದು. ಹಾಗು ಮಣ್ಣಿನಿಂದ ಮಾಡಿದ ಗಡಿಗೆ, ಮಡಿಕೆ, ತಂಬಿಗೆ, ಪರಾತ, ರೊಟ್ಟಿಸುಡುವ ಹಂಚು, ಧಾನ್ಯವನ್ನು ಸಂಗ್ರಹಿಸುವ ದೊಡ್ಡ ರಂಜಣಿಗೆ ಇವೆಲ್ಲವುಗಳನ್ನು ನೋಡಿದರೆ, ಅವುಗಳಲ್ಲಿ ಮಣ್ಣಿನ ಹೊರತು, ಅನ್ಯವಸ್ತುವು ಕಾಣುವದಿಲ್ಲ ಬಂಗಾರದ ವಸ್ತುಗಳಂತೆಯೇ, ಮಣ್ಣಿನ ಪಾತ್ರೆಗಳಂತೆಯೇ, ಸರ್ವದೇಹಗಳೂ, ದೇಹಗಳೇ. ಅವುಗಳಲ್ಲಿ ಪಂಚಭೂತಗಳೂ ಅವುಗಳ ತಕ್ಕಂತೆ ಸಮಸಮಾನವಾಗಿ ಇದ್ದೇ ಇರುವವು ಅಲ್ಲಿ 'ನೀನು ಯಾರು' ಎಂದು ಕೇಳುವದಕ್ಕೆ ಭಿನ್ನತ್ವವೆಲ್ಲಿಂದ ಬರುವದು. ಹೀಗೆ ಆತ್ಮವಸ್ತುವೂ ವಸ್ತುತಃ ಅದ್ವೈತವಾಗಿಯೂ ಸಮಸಮಾನವಾಗಿಯೂ ಸರ್ವತ್ರದಲ್ಲಿ ವ್ಯಾಪಕವಾಗಿರುವದರಿಂದಲೂ ದೇಹಗಳಲ್ಲಿ ಪಂಚಭೂತಗಳೂ ಸಮಸಮಾನವಾಗಿರುವದರಿಂದಲೂ 'ನೀನು ಯಾರು' ಎಂಬ ಪ್ರಶ್ನವು ಅರ್ಥಹೀನವಾಗಿರುವದು. ಇದು ವಾಣಿಯಿಂದ ಮಾತಾಡುವ ಮೂರ್ತಿಯ ವಿಷಯವಷ್ಟೇ; ಯಾವನಾದರೂ ತಾನು ತಾನೇ ಅದ್ವೈತವಾದ (ಆತ್ಮವಸ್ತುವು) ಇದ್ದು, 'ನೀನು ಯಾರ ಎಂದು ಪ್ರಶ್ನೆ ಮಾಡಿದರೆ ಅವನು ಅತ್ಯಂತವಾದ ಭ್ರಾಂತಿಯಿಂದ ಮೋಹಿತನಾಗಿರುವನೆಂತಲೂ, ನಿಜಾತ್ಮಜ್ಞಾನವನ್ನು ಮರೆತಿರುವನೆಂತಲೂ, ತಿಳಿಯಬೇಕು. ಮುನಿಗಳೇ, ನೀವು ಮಾಡಿದ ಪ್ರಶ್ನೆಯು ಅರ್ಥದ ವಿಚಾರವನ್ನು ಮಾಡಿದರೆ, ಇಷ್ಟು ಅನರ್ಥವು ಕಂಡು ಬರುವದು. ಅದರಲ್ಲಿ(ನಿಮ್ಮ ಪ್ರಶ್ನೆಯಲ್ಲಿ) ಪರಮಾರ್ಥವು ಲೇಶವಾದರೂ ತೋರುವದಿಲ್ಲ 'ನೀನು ಯಾರು' ಎಂಬ ನಿಮ್ಮ ಪ್ರಶ್ನವು ವ್ಯರ್ಥವಾಗಿರುವದು. 'ದೇಹಕ್ಕೆ ನೀನು ಯಾರು ಎಂದು' ಆತ್ಮನು ಯಾವಾಗ ತಾನು ಸ್ವಂತ ಕೇಳುವನೋ ಅಥವಾ ಆತ್ಮವೇ ತಾನಾಗಿರುವಾಗ ತಾನೇ ಅಂಥ ಪ್ರಶ್ನವನ್ನು ಕೇಳುವನೋ, ಆಗ ಅವನು ತನ್ನ ಆತ್ಮತ್ವವನ್ನು ಭ್ರಾಂತಿಯಿಂದ ಮರೆತು ಮೋಹಿತನಾಗಿರುವನೆಂತಲೂ, ಅವನಿಗೆ ಹುಚ್ಚು ಹಿಡಿದಿರುವದೆಂತಲೂ, ತಿಳಿಯಬೇಕು. ವಸ್ತುತಃ ಹಗ್ಗದಲ್ಲಿ ಸರ್ಪವಿರುವದಿಲ್ಲ. ಆದರೆ ಭ್ರಮದಿಂದ ನಮಗೆ ಆ ಹಗ್ಗದಲ್ಲಿ ಸರ್ಪದಾಭಾಸವಾಗುವದು. ಅಂದರೆ ಹಗ್ಗವು ಸರ್ಪದಂತೆ ತೋರುವದು.

ಆ ತೋರಿದ ಸರ್ಪಕ್ಕೆ ಹಗ್ಗವು ನೀನು ಯಾರು ಎಂದು ಕೇಳುವದು ಮಿಥ್ಯವೇ ಹೊರ್ತು ನಿಜವಲ್ಲ.

## ಮನೋವಾಚಾದಿ ಇಂದ್ರಿಯಗಳಲ್ಲಿ ಆತ್ಮನ ವ್ಯಾಪಕತೆ.

ಹಂಸಸ್ವರೂಪಿ ಭಗವಂತನು ಆ ಮುನಿಗಳನ್ನು ಕುರಿತು:—"ಮುನಿಗಳೇ, ಪರಮಾತ್ಮನಾದ ನಾನು ಸರ್ವತ್ರದಲ್ಲಿಯೂ ವ್ಯಾಪಿಸಿರುವೆನು. ನಾನು ಇಲ್ಲದಂಥ ಸ್ಥಾನವು ಎಳ್ಳಷ್ಟಾದರೂ ಇರುವದಿಲ್ಲ ನಾನೇ ಎಲ್ಲಿಯಾದರೂ ಪೂರ್ಣವಾಗಿ ತುಂಬಿರುವೆನು. ನನ್ನ ಹೊರ್ತು ಒರಿದಾದ ಸ್ಥಳವು ಎಲ್ಲಿಯೂ ಇರುವದಿಲ್ಲ. ಅಲ್ಲಿ ವ್ಯಾಪ್ಯ (ವ್ಯಾಪಿಸಲ್ಪಡತಕ್ಕ ವಸ್ತು) ವ್ಯಾಪಕ (ವ್ಯಾಪಿಸುವ ವಸ್ತು) ಇವುಗಳಲ್ಲಿ ಸಹಜವಾಗಿಯೇ ಅಭಿನ್ನತ್ವವು (ಐಕ್ಯವ) ಇರುವದು. ವ್ಯಾಪ್ಯ-ವ್ಯಾಪಕವೆಂಬ ಭೇದವೇ ಇರುವದಿಲ್ಲ. ಶಾಬ್ದಿಕ (ಕೇವಲ ಶಬ್ದಗಳನ್ನು ಬಡಬಡಿಸುವ) ಪಂಡಿತರು, ತಮ್ಮ ಮನಸ್ಸಿನ ಸಂಕಲ್ಪದಲ್ಲಿ ಒಂದದ್ದಕ್ಕೆ (ಮನಃ ಸಂಕಲ್ಪದಿಂದ ಹುಟ್ಟಿದ್ದನ್ನು) ಭಿನ್ನತ್ವವನ್ನು ಕಲ್ಪಿಸಿ, ಅದು ಭಿನ್ನ ವಸ್ತುವೆಂದು ಕರೆಯುವರು. ಅಂದರೆ, ಮನಸ್ಸಿನ ಸಂಕಲ್ಪದಿಂದ ಅವರಲ್ಲಿ ಭಿನ್ನವಸ್ತುವಿನ ಕಲ್ಪನೆಯಾಗಿ ದ್ವೈತವು ಹುಟ್ಟುವದು. ಅದರಿಂದ ಅದು ಭಿನ್ನ, ಇದು ಬೇರೆ ಎಂದು ಮಾತಾಡುವರು. ಆದರೆ ಆ ಮನಸ್ಸು ನನ್ನ ನಿಜಸ್ವರೂಪದ ವಿವರ್ತನ (ವಾಸ್ತವಿಕವಾಗಿ ಅಸ್ತಿತ್ವದಲ್ಲಿ ಇರದಿದ್ದರೂ ಮಾಯೆಯಿಂದ ಭಾಸಮಾನವಾಗುವ ವಿಕಾರ, ವಿವರ್ತನ= ಅವಿದ್ಯೆಯಿಂದ ಸದ್ವಸ್ತುವಿನ ಮಿಥ್ಯವಾದ ಭಾಸವು. ಉದಾ:—ಹಗ್ಗದಲ್ಲಿ ಸರ್ಪದ ಭಾಸ. ಅದರಂತೆ ಸದ್ವಸ್ತುವಾದ ಬ್ರಹ್ಮನಲ್ಲಿ ಅಸತ್ಯವಾದ ಪ್ರಪಂಚದ ಭಾಸ.) ವದೆಂಬ ಪ್ರಭೇದದ ಗುರುತು ಅವರಿಗೆ ಆಗಿರುವದಿಲ್ಲ. ಮನಸ್ಸು ನನ್ನ ಸ್ವರೂಪದ ಅಸತ್ಯವಾದ ತೋರಿಕೆಯಾದರೂ, ಅದು ನನ್ನಿಂದ ಭಿನ್ನವಾಗಿರುವದಿಲ್ಲ ಆದರೆ ಅವರು ಭಿನ್ನವೆಂದು ತಿಳಿಯುವರು, ಇದಕ್ಕೆ ಅವಿದ್ಯೆಯೇ ಕಾರಣವು. ನಿಜವಾದ ಅದರ ಅಭೇದದ ಗುರುತು ಅವರಿಗೆ ಭ್ರಮದಿಂದ ಹತ್ತುವದಿಲ್ಲ. ಮನಸ್ಸನ್ನು ನಾವು ನಾವಧಾನವಾಗಿ ವಿಚಾರ ಮಾಡಿ ಲಕ್ಷಿಸ(ನೋಡ)ಹೋದರೆ, ಅದನ್ನು ನಾವು ಲಕ್ಷಿಸ(ನೋಡ)ಲಾರೆವು. ಇದರಂತೆ ಪರಬ್ರಹ್ಮವಾದರೂ ಪೂರಾ ಅಲಕ್ಷ್ಯವಾಗಿರುವದು. ಇವೆರಡು— ಮನಸ್ಸು ಹಾಗು ಪರಬ್ರಹ್ಮಗಳು ಚಿದ್ರೂಪವಾಗಿ ಸಮಾನವಾಗಿರುವವು. ಚಿದ್ರೂಪ ದೃಷ್ಟಿಯಿಂದ ಮನಸ್ಸು ಹಾಗು ಪರಬ್ರಹ್ಮ ಇವೆರಡು ಒಂದೇಸಮಾನವಾಗಿರುವವು.

ಮುತ್ತಿನ ಚಿಪ್ಪಿನಲ್ಲಿ (ಶಿಂಪಿನಲ್ಲಿ) ರಜತವು (ಬೆಳ್ಳಿಯು) ತೋರುವದು. ಅಂದರೆ ಮುತ್ತಿನ ಶಿಂಪು ಬೆಳ್ಳಗಿರುವದರಿಂದ ಅದನ್ನು ನೋಡಿದ ಕೂಡಲೆ ಬೆಳ್ಳಿಯು ಅಭಾಸವಾಗುವದು; ಆದರೆ ನಿಜವಾಗಿ ಬೆಳ್ಳಿಯು ಅಲ್ಲಿ ಇರುವದೇ ಇಲ್ಲ. ಅದರಂತೆ ನನ್ನ (ಆತ್ಮ) ಸ್ವರೂಪದಲ್ಲಿ ಮನಸ್ಸು ಕಲ್ಪನಾ ಮಾತ್ರವಾಗಿದ್ದು, ಮಿಥ್ಯವಾಗಿ ಭಾ ವಾಗುವದು. (ತೋರುವದು ) ವಸ್ತುತಃ ಮನಸ್ಸು ಅಲ್ಲಿ ಇರುವದಿಲ್ಲ ಕಲ್ಪನಾ ಮಾತ್ರದಿಂದ ಅದರ ಭಾಸ ಮಾತ್ರವಾಗುವದು. ಅದೆಲ್ಲ ಕಲ್ಪನೆಯೇ. ಶ ್ದ ಮಹಿಮೆಯನ್ನು ವಿಚಾರಮಾಡಿ ನೋಡಿದರೆ, ಶಬ್ದ ಸ್ವರೂಪದಿಂದ ಆತ್ಮವಸ್ತುವು ವ್ಯಕ್ತವಾದರೂ, ಪರಬ್ರಹ್ಮವು ವಸ್ತುತಃ ನಿಃಶಬ್ದವಾಗಿದೆ; ಆದರೆ ಶಬ್ದ ಸ್ವರೂಪದಿಂದ ಅದು ವ್ಯಕ್ತ ಸ್ವರೂಪಕ್ಕೆ ಒಂದರೂ ಅದು ಜ್ಞಾನಘನವಾಗಿರುವದು ಜ್ಞಾನಾರ್ಥವಿಲ್ಲದೆ ಇರುವ ವಚನವು ಸ್ವಲ್ಪಾದರೂ ಇರುವದಿಲ್ಲ. ಪ್ರತಿಯೊಂದು ವಚನವೂ ಜ್ಞಾನಪೂ ರ್ಣ, ಹಾಗು ಅರ್ಥಪೂರ್ಣವಾಗಿರುವದು. ವಕ್ತಾ (ಮಾತಾಡುವವನು) ವಾಚ್ಯ (ಮಾತಿನಿಂದ ನುಡಿಯುತಕ್ಕ ವಸ್ತುವು) ವಚನ (ಮಾತು) ಇವು ಮೂರೂ ನಾನೇ ಇರುವೆನು. ವಚನ(ಮಾತು) ವಕ್ತಾ (ಮಾತಾಡುವವ) ಇವೆರಡೂ ನಾನೇ ಇರುವಾಗ ಜಗತ್ತಿನಲ್ಲಿ ನನ್ನ ಹೊರ್ತು ಎರಡನೆಯ ವಸ್ತುವು ವಚನವಾಗಲಾರದು. ಅಂದರೆ ನಾನೇ ವಚನವು; ಹಾಗು ಜಗತ್ತಿನಲ್ಲಿ ನನ್ನ ಹೊರ್ತು ಅನ್ಯ ವಸ್ತುವು ವಕ್ತಾರ (ಮಾತಾಡುವವ) ನಾಗಲಾರದು, ಅಂದರೆ ನಾನೇ ವಕ್ತಾರನು. ಇವೆರಡುಗಳಲ್ಲಿ ಅನ್ಯ ವಸ್ತುವೇ ಇರುವದಿಲ್ಲ. ನಾನೇ ವೇದಗಳಿಗೆ ವೇದವು, ಅಂದರೆ ವೇದಗಳಿಗೆ ನಾನೇ ನಿಜವಾಗಿ ಪ್ರಣವ (ಓಂಕಾರ) ಸ್ವರೂಪನು. ವಾಣಿಗೆ ಮೂಲ ಆಧಾರನಾದರೂ ನಾನೇ, ನಾನೇ ವಾಣಿಗೆ ಜನ್ಮಸ್ಥಾನವು. ಶಬ್ದಗಳಿಗೆ ನನ್ನ ಹೊರ್ತು ಎರಡನೆಯ ಸ್ಥಾನವೇ ಇಲ್ಲ. ನಾನೇ ಶಬ್ದಗಳ ಮೂಲಭೂತನಾಗಿರುವೆನು. ದೃಷ್ಟಿಯಲ್ಲಿರುವ ನೋಡುವ ಶಕ್ತಿಯು ಪೂರ್ಣಬ್ರಹ್ಮವೇ, ಇರುವದು. ನೋಡುವದೇ ಮುಖ್ಯ ಜ್ಞಾನವು. ನಿಜದೃಷ್ಟಿಯಲ್ಲಿ ಚೈತನ್ಯಘನವಾದ ಪರಬ್ರಹ್ಮ ವಸ್ತುವು ಇದ್ದೇ ಇರುವದು; ಆದ್ದರಿಂದ ನಾನೇ ಕಣ್ಣು, ನಾನೇ ನೋಡುವವನು, ನಾನೇ ದೃಶ್ಯನು (ನೋಡತಕ್ಕ ವಸ್ತುವು) ನಾನೇ ನೋಡುವವನು. ಈ ಮೂರು ಲೋಕಗಳಲ್ಲಿ ನನ್ನ ಹೊರ್ತು ಇನ್ನೊಂದು ನೋಡುವ ಅವಸ್ಥೆಯೇ ಇರುವದಿಲ್ಲ. ನಾನೇ ಕಣ್ಣುಗಳಿಗೆ ನಿಜವಾದ ಕಣ್ಣು, ನಾನೇ ಸೋಜ್ವಲವಾದ ದೃಷ್ಟಿಯನ್ನು ನೋಡುವವನಿದ್ದು, ಸರ್ವವನ್ನೂ ನೋಡುವೆನು. ನನ್ನ ಹೊರ್ತು ನೋಡುವ ಕಳೆಯು

ಎಲ್ಲಿಯೂ ಸಿಗಲಾರದು. ಎರಡನೆಯ ವಸ್ತುವಿನಲ್ಲಿ ನೋಡುವ ಶಕ್ತಿಯು ಇರುವದೇ ಇಲ್ಲ. ಶಬ್ದಗಳನ್ನು ಪಠಿಸುವವನು (ಶಬ್ದಗಳಲ್ಲಿ ಶಬ್ದವನ್ನುಂಟು ಮಾಡುವವನು) ನಾನೇ. ಶ್ರವಣದಲ್ಲಿ ಶ್ರವಣ ಮಾಡುವವನೂ ನಾನೇ.

ಹೀಗೆ ಏಕಾತ್ಮತೆಯನ್ನು ವಿಚಾರದಿಂದ ನೋಡಿದರೆ ಶಬ್ದವು ನಿಃಶಬ್ದವೂ ಪರಬ್ರಹ್ಮನೇ, ಕಿವಿ, ವಚನಗಳೂ ನಾನೇ, ಕೇಳುವವನೂ ನಾನೇ, ಶಬ್ದಾರ್ಥಗಳನ್ನು ತಿಳಿಯುವವನೂ ನಾನೇ, ಶ್ರವಣವನ್ನು ಕೇಳುವವನು ನನ್ನ ಹೊರತು ಇನ್ನೊಬ್ಬನು ನಿಜವಾಗಿ ಇರುವದಿಲ್ಲ. ನಾನೇ ಮೂಗು, ನಾನೇ ವಾಸನೆಯು, ಸುವಾಸವನ್ನು ತಿಳಿಯುವವನು ನಾನೇ. ಪರಿಮಳಕ್ಕೆ ನನ್ನ ಹೊರತು ಅನ್ಯಸ್ಥಾನವೇ ಇರುವದಿಲ್ಲ. ನಾನೇ ಪರಿಮಳಕ್ಕೆ ಮೂಲಸ್ಥಾನವು. ನಾಲಿಗೆಯಲ್ಲಿ ರಸಜ್ಞತೆಯು ಇರುವದರಿಂದ, ಅದು ಪದಾರ್ಥಗಳಲ್ಲಿಯ ರಸವನ್ನು ಹೀರಿ ರುಚಿನೋಡುವದು. ಆದರೆ ಅದು (ನಾಲಿಗೆಯು)ಕೇವಲ ಚರ್ಮವೇ ಸರಿ. ಅದನ್ನು ಕೊಯ್ದುಬಿಟ್ಟರೆ, ಅದಕ್ಕೆ ಪದಾರ್ಥಗಳ ರಸಾಸ್ವಾದ ಮಾಡಲಿಕ್ಕೆ ಬರುವದಿಲ್ಲ. ಇಷ್ಟೇ ಅಲ್ಲ. ಅದಕ್ಕೆ ಇದರಲ್ಲಿ ರುಚಿಯದೆ ಇದು ರುಚಿಕರವಾಗಿರುವದಿಲ್ಲ ಎಂಬದೇ ಗೊತ್ತಾಗುವದಿಲ್ಲ. ಆದ್ದರಿಂದ ನಾನೇ ರಸವು, ನಾನೇ ನಾಲಿಗೆಯು, ಸ್ವಾದವನ್ನು ತಿಳಿಯುವವನೂ ನಾನೇ. ನನ್ನ ಹೊರತು ರಸಾಸ್ವಾದವನ್ನು ಸವಿಯುವದು ಅನ್ಯದಾವದೂ ಇರುವದಿಲ್ಲ. ಇತರ ಇಂದ್ರಿಯಗಳ ಪ್ರವೃತ್ತಿಗಳು ಇರುವವಷ್ಟೇ; ಅವಾದಾರೂ ನಾನೇ ಎಂದು ನಿಶ್ಚಯವಾಗಿ ತಿಳಿ. ನಾನೇ ಸರ್ವಾತ್ಮನು. ನಾನೇ ಆತ್ಮಮೂರ್ತಿಯು ಕ್ರಿಯಾಶಕ್ತಿಯೂ ನಾನೇ. ಪಂಚಭೂತಾತ್ಮಕವಾದ ದೇಹವು ನನ್ನನ್ನು ಬಿಟ್ಟು ಇರುವದೆಂದು ಭ್ರಾಂತಿಷ್ಟರು ಅನ್ನುವರು. ಈ ಪಂಚಭೂತಾತ್ಮಕದೇಹವು ಸರ್ವವ್ಯಾಪಕನಾದ ವಸ್ತು (ಪರಬ್ರಹ್ಮ)ನನ್ನು ಬಿಟ್ಟು ಬೇರೆ ಹ್ಯಾಗೆ ಇರಲು ಸಾಧ್ಯವದೆ? ಹ್ಯಾಗೆ ನೀರಿನಲ್ಲಿಯ ಜಲಮಯತರಂಗಗಳು, ಜಲರೂಪದಿಂದ ನೀರಿನಲ್ಲಿಯೇ ಕ್ರೀಡಿಸುವವೋ (ಅಲೆದಾಡುವವೋ) ಅದರಂತೆ ನನ್ನ ಸ್ವರೂಪದಲ್ಲಿ, ಸಾಂಗವಾದ ದೇಹವು ನನ್ನ (ಆತ್ಮ) ರೂಪದಿಂದ ಅಭಿನ್ನವಾಗಿ ಇರುವದು. ಒಂದಾನೊಂದು ಕಾಲದಲ್ಲಿ ತುಪ್ಪವು ಹೆತ್ತಾಗ, ಆ ಹೆತ್ತುಪ್ಪದ ಗೊಂಬೆಯನ್ನು ಮಾಡುವೆವು; ಆದರೆ ಆ ಹೆತ್ತುಪ್ಪವು ಮೂಲತುಪ್ಪದಿಂದ ಭಿನ್ನವಾಗಿರದೆ ಅವ್ಯತಿರಿಕ್ತವಾಗಿರುವದು. ಹೆತ್ತುಪ್ಪದ ಗೊಂಬೆಯಾದರೂ ತುಪ್ಪವೇ ಸತ್ಯವಾಗಿರುವದು. ಅದರಂತೆ ನನ್ನಿಂದ ಹುಟ್ಟಿದ ಭೂತಗಳು ನನ್ನಲ್ಲಿಯೇ ಐಕ್ಯವಾಗಿ, ನನ್ನ ರೂಪವಾಗಿಯೇ

ಇರುವವು. ಅವು ನನ್ನಿಂದ ಭಿನ್ನವಾಗಿರುವದಿಲ್ಲ. ನೀರಿನಲ್ಲಿಯೇ ಜಲಪೂರ್ಣ ಆಣೇಕಲ್ಲುಗಳು ಹುಟ್ಟುವವು. ಆದರೆ ಆಣೇಕಲ್ಲುಗಳು ಹೆತ್ತುಪ್ಪದಂತೆ ಹೆಪ್ಪುಗಟ್ಟಿದ ನೀರಿನ ಸ್ಥಿತಿಯಲ್ಲಿರುವವು. ಅವು ನೀರಿನಿಂದ ಅಭಿನ್ನವಾಗಿದ್ದರೂ, ಅವು ಸಾಕಾರವಾಗಿರುವವು. ಅವು ನೀರಿನಲ್ಲಿ ಸಾಕಾರವಾಗಿ ತೋರುವವು. ಅದರಂತೆ ನನ್ನ (ಆತ್ಮ) ಸ್ವರೂಪದಲ್ಲಿ ಚರಾಚರ ವಸ್ತುಗಳು ನನ್ನಿಂದ (ಆತ್ಮನಿಂದ) ಅಭಿನ್ನವಾಗಿರುವವು. ಅವು ಸಾಕಾರವಾಗಿ ತೋರಿದರೂ, ಅವೆಲ್ಲ ಆತ್ಮಸ್ವರೂಪವಾಗಿಯೇ ತೋರುವವು. ಒಂದು ವಸ್ತ್ರವನ್ನು ನೇದು ಸಿದ್ಧಮಾಡಬೇಕಾದರೆ ಒಂದು ನೂಲೆಳೆಯನ್ನು ಮತ್ತೊಂದು ನೂಲೆಳೆಯಲ್ಲಿ ಕೂಡಿಸಿ ನೇಯಬೇಕಾಗುವದು. ಹೀಗೆ ಅನೇಕ ತಂತುಗಳು ಕೂಡಿದರೆ ಒಂದು ವಸ್ತ್ರವಾಗುವದು. ಕೇವಲ ಒಂದೇ ನೂಲಿನಿಂದ ವಸ್ತ್ರವಾಗುವದಿಲ್ಲ. ಆದರೆ ಆ ಒಂದು ನೂಲೆಳೆಯು-ವಸ್ತ್ರದೊಳಗಿನ ಒಂದು ಭಾಗವು, ಅದು ಆ ತಂತುಗಳಿಂದ ವಿಂಗಡಿಸಿದರೆ ಬೇರೇ ಎಂದು ತೋರುವದು. ಆದ್ದರಿಂದ ಒಂದು ನೂಲೆಳೆಯು ಬೇರೆ ಇರುವದೆಂದು ಕೇವಲ ತಂತುವಿನ ಕಡೆಗೆ ದೃಷ್ಟಿಯನ್ನಿಡುವವರು ಅನ್ನುವರು. ಆದರೆ ಅದು ಆ ವಸ್ತ್ರದೊಳಗೇ ಐಕ್ಯವಾಗಿರುವದು. ಇದರಂತೆ ಆತ್ಮಸ್ವರೂಪದಲ್ಲಿ ಜಗತ್ತು ಭಾಸವಾಗುವದು. ತಂತುವಿನ ಕಡೆಗೆ ದೃಷ್ಟಿಯಿಟ್ಟು ನೋಡಿದರೆ, ವಸ್ತ್ರವು ಕಾಣುವದಿಲ್ಲ. ಇದರಂತೆ ಆತ್ಮನಲ್ಲಿ ಲಕ್ಷ್ಯವನ್ನಿಟ್ಟು ನೋಡಿದರೆ ಜಗತ್ತು ಇರುವದೇ ಇಲ್ಲೆಂದು ತೋರುವದು. ಆದರೆ ವಸ್ತುತಃ ವಿಚಾರಮಾಡಿ ನೋಡಿದರೆ ಜಗತ್ತು ಆತ್ಮವಸ್ತು ವ್ಯತಿರಿಕ್ತವಾಗಿರುವದಿಲ್ಲ. ಹೀಗೆ ಅದ್ವೈತ ತತ್ವದ ಸಾರಸ(ಐಕ್ಯಭಾವದ ಸಾರಸ)ದಿಂದ ಅಂದರೆ ಆತ್ಮೈಕಭಾವದ ದೃಷ್ಟಿಯಿಂದ ಪರಬ್ರಹ್ಮವಸ್ತುವು ಅನಾಯಾಸವಾಗಿ ಸರ್ವತ್ರದಲ್ಲಿಯೂ ವ್ಯಾಪಿಸಿ ಸರ್ವರೂಪಿಯೂ ಆಗಿರುವದು.

ಇಂಥ ಅದ್ವೈತ ಬೋಧದಿಂದ, ನಾನೇ ಸರ್ವಾತ್ಮಕನಾದ ಸರ್ವಾತ್ಮನೊಬ್ಬನೇ ಸರ್ವ ವ್ಯಾಪಕನಾಗಿರುವೆನು, ಎಂಬ ನಿಶ್ಚಯದ ವಿವೇಕವು ಹುಟ್ಟಿದರೆ, ಬುದ್ಧಿಯಲ್ಲಿ ಆತ್ಮಬೋಧದ ಪ್ರಕಾಶವು ಹುಟ್ಟಿ, ಸರ್ವ ಜಗವೂ ಪರಮಾತ್ಮವೇ ಎಂಬ ನಿಶ್ಚಯ ಜ್ಞಾನವಾಗುವದು. (ನಾನು) ಆತ್ಮವೊಂದೇ ಸರ್ವತ್ರದಲ್ಲಿ ವ್ಯಾಪಿಸಿರುವದೆಂಬ ದೃಢವಾದ ನಿಶ್ಚಯವನ್ನು ನಮ್ಮ ಬುದ್ಧಿಯು ತಾಳಿದರೆ ಅಂದರೆ ನಮ್ಮಲ್ಲಿ ಪರಬ್ರಹ್ಮವೊಂದೇ ಸರ್ವವ್ಯಾಪಕ ವಸ್ತು ಎಂಬ ದೃಢವಾದ ನಿಶ್ಚಯವು ನಮ್ಮ ಬುದ್ಧಿಯಲ್ಲಿ ಹುಟ್ಟಿದರೆ, ನಮಗೆ ಸಾಧನದ ಕಾರ್ಯಗಳು

ಬೇಕಾಗಿರುವದೇ ಇಲ್ಲ. ಸಾಧನಗಳಿಲ್ಲದೇ ನಾವು ತತ್‌ಕ್ಷಣವೇ ನಿತ್ಯಮುಕ್ತ ರಾಗುವೆವು.''

ಉದ್ಧವನೇ, ಸರ್ವಾತ್ಮವಾದ ಪರಬ್ರಹ್ಮವು ಚೈತನ್ಯಘನವಾಗಿರುವದೆಂಬ ಅತಿ ಸುಲಭವಾದ ನಿಜಜ್ಞಾನವನ್ನು ಆ ಸನಕಾದಿಕ ಮುನಿಗಳಿಗೆ ತಿಳಿಸಿ ಹೇಳಿ, ಅವರಲ್ಲಿದ್ದ ದ್ವೈತಖಂಡನ ಮಾಡಿದೆನು. ಬ್ರಹ್ಮಾದಿಕರಿಗೂ ಕೂಡ ಕಠಿಣವಾದ ಸನಕಾದಿಕರ ಪ್ರಶ್ನೆಗಳಿಗೆ ನಾನು ಆ ಮುನಿಗಳಿಗೇ ಸಮಾಧಾನವಾಗುವಂತೆ ಉತ್ತರವನ್ನು ಒಳ್ಳೇ ವಿವರಣಪೂರ್ವಕವಾಗಿ ಹೇಳಲು, ಅವರಲ್ಲಿಯ ಭೇದ ಜ್ಞಾನವು ಹೋಗಿ, ಆತ್ಮೈಕ ಜ್ಞಾನವು ಒಂದಿತು.

## ವಿಷಯತ್ಯಾಗದ ಹೊರತು ಬ್ರಹ್ಮಜ್ಞಾನ ಪ್ರಾಪ್ತಿಯಾಗಲಾರದು.

ಭಗವಂತನು ಮುನಿಗಳನ್ನು ಕುರಿತು:—ಮುನಿಗಳೇ, ನೀವು ಬ್ರಹ್ಮ ದೇವನಿಗೆ 'ವಿಷಯಗಳು ಚಿತ್ತದಲ್ಲಿ ಪ್ರವೇಶ ಮಾಡಲು, ಹಾಗು ಚಿತ್ತವು ವಿಷಯ ಗಳಲ್ಲಿ ಪ್ರವೇಶ ಮಾಡಲು, ಅವುಗಳನ್ನು ಪ್ರತ್ಯೇಕವಾಗಿ ಬೇರೆ ಬೇರೆ ವಿಂಗಡಿಸಲು ಸಾಧ್ಯವಿಲ್ಲ' ಎಂಬ ಪ್ರಶ್ನವನ್ನು ಕೇಳಿರುವಿರಷ್ಟೇ; ಆದರೆ ಇದಕ್ಕೂ ಉತ್ತರ ವನ್ನು ಸ್ಪಷ್ಟವಾಗಿ ಹೇಳುವೆನು ಕೇಳಿರಿ. ವಿಷಯತ್ಯಾಗದ ಹೊರತು, ಬ್ರಹ್ಮ ಜ್ಞಾನವು ಪುರುಷನಿಗೆ ಎಂದಿಗೂ ಬರಲಾರದು. ವಿಷಯತ್ಯಾಗವನ್ನು ಹ್ಯಾಗೆ ಮಾಡಬೇಕೆಂಬದರ ಗುರುತನ್ನು ನಿಮಗೆ ಪೂರಾ ಹೇಳುವೆನು ಕೇಳಿರಿ.

## ಸ್ವರೂಪ ವಿಸ್ಮರಣದಿಂದಲೂ, ಕರ್ತೃತ್ವ ಭೋಕ್ತೃತ್ವಾಭಿಮಾನ ದಿಂದಲೂ ದೇಹದ್ವಯದ ಉತ್ಪತ್ತಿಯು.

ಮುನಿಗಳೇ, ಚಿತ್ತ ಹಾಗು ವಿಷಯ ಇವೆರಡೂ ಜೀವದ ನಿಜಸ್ವರೂಪ ಗಳಲ್ಲ. ಆದರೆ ಉಪಾಧಿ ಯೋಗದಿಂದ ಇವೆರಡೂ (ವಿಷಯ ಚಿತ್ತಗಳೆಂಬ) ದೇಹಗಳು ಪ್ರವಾಹರೂಪದಿಂದ ಜೀವಕ್ಕೆ ಬಂದಿರುವವು. ಕರ್ತೃತ್ವ ಭೋಕ್ತೃತ್ವ ರೂಪದಿಂದ (ನಾನು ಮಾಡುತ್ತೇನೆ, ನಾನು ಭೋಗಮಾಡುತ್ತೇನೆ ಎಂಬ ಅಭಿಮಾನದ ಯೋಗದಿಂದ) ಅಂತಃಕರಣವು ವಿಷಯಾಸಕ್ತವಾಗುವದು. ಆದ ರಿಂದ ಉಭಯ ದೇಹಗಳ ಕಾರಣವಾದ ಅಹಂಕಾರವು ಉದ್ಭವಿಸುವದು, ಇದೇ ಅಹಂಕಾರವು ಚಿತ್ತವನ್ನು, ವಿಷಯಗಳಲ್ಲಿ ಮಗ್ನವಾಗಿರಿಸುವದಕ್ಕೆ ಮೋಹಿಸಿ, ಅದನ್ನು ಮರುಳು ಮಾಡಿತು. ಆದರಿಂದ ಆ ಚಿತ್ತವು ತನ್ನ ನಿಜಾತ್ಮಸ್ವರೂಪ ವನ್ನು ಮರೆತುಬಿಟ್ಟಿತು. ಈ ಅಹಂಕಾರದಿಂದ ಜೀವ ಹಾಗು ಮನಸ್ಸು ಇವು ಗಳು ವಿಷಯಗಳಲ್ಲಿ ತಾದಾತ್ಮ್ಯವನ್ನು ಹೊಂದಿ (ಏಕರಸವಾಗಿ) ದೃಢವಾಗಿ

ಅವುಗಳನ್ನು ಬಿಡದೆ ಹಿಡಕೊಂಡವು. ಚಿತ್ತವು ಜೀವದ ಸ್ವರೂಪವಾಗಿದ್ದರೆ ಅದು ವಿಷಯಗಳಲ್ಲಿ ಆಸಕ್ತವಾಗುತ್ತಿರಲಿಲ್ಲ. ಜೀವಕ್ಕೆ ಉಭಯ ಉಪಾಧಿಗಳು ಅಭಿಮಾನದಿಂದಲೇ ಉಂಟಾಗಿ, ಈ ಅಭಿಮಾನವೇ ಅವುಗಳನ್ನು ಜೀವದಲ್ಲಿ ಬೆಳೆಸಿತು. ಪುರುಷನು ತನ್ನ ನಿಜ ಸ್ವರೂಪವನ್ನು ಮರೆತುಬಿಟ್ಟು, ಸ್ವಪ್ನದೊಳಗಿನ ಸ್ವಪ್ನದೇಹವನ್ನೇ ಅತ್ಯಂತವಾಗಿ ಪ್ರೀತಿಸುವನು. ಇದರಂತೆ ದೇಹವು ತನ್ನ ಆತ್ಮರೂಪವನ್ನು ಮರೆತು ಅಭಿಮಾನದಿಂದ ವಿಷಯಗಳಲ್ಲಿ ಆಸಕ್ತವಾಗುವ ದೆಸೆಯನ್ನು ಹೊಂದಿರುವದು. ವಸ್ತುತಃ ಜೀವದ ಸ್ವರೂಪವು ನಿತ್ಯವೂ, ಶುದ್ಧವೂ, ಮುಕ್ತವೂ ಚೈತನ್ಯಘನವೂ (ಬ್ರಹ್ಮಮಯವೂ) ಆಗಿದ್ದು, ಅಭಿಮಾನವು ಅದಕ್ಕೆ ಅಂಟಿಕೊಂಡು ಅದನ್ನು (ಜೀವವನ್ನು) ಮಿಥ್ಯಾಬಂಧನದಲ್ಲಿ ತೊಡಕಿಸಿರುವದು.

## ಭಕ್ತಿಯಿಂದ ಅಭಿಮಾನದ ನಿರ್ಮೂಲತೆ. ಜೀವದ ತದ್ರೂಪತೆ ದೇಹದ್ವಯಗಳ ನಿರಸನ.

ಆದ್ದರಿಂದ ಅಭಿಮಾನವನ್ನು ಅಳಿಯಬೇಕು. ಅದರಿಂದ ಸಕಲ ಬಂಧನಗಳೂ ಕಡಿಯಲ್ಪಡುವವು ಅಭಿಮಾನ ನಿರಸನ ಮಾಡುವದಕ್ಕಾಗಿ ನನ್ನ (ಭಗವಂತನ) ಭಜನ ಮಾಡಬೇಕು. ವೈರಾಗ್ಯವಿಲ್ಲದೆ ನನ್ನಲ್ಲಿ (ಪರಮಾತ್ಮನಾದ ನನ್ನಲ್ಲಿ) ಭಕ್ತಿಯನ್ನಿಟ್ಟರೆ, ಅದು ನಿಷ್ಪ್ರಯೋಜನವೇ ಸರಿ; ಯಾಕಂದರೆ ಅಂಥ (ಭಕ್ತಿಯು) ಪೂರಾ ನಿಃಸತ್ವವೆಂದು ನಿಶ್ಚಯವಾಗಿ ತಿಳಿಯಬೇಕು. ಪುರುಷನಲ್ಲಿ ವೈರಾಗ್ಯಯುಕ್ತ ಭಕ್ತಿಯು ಹುಟ್ಟಿದರೆ, ಜೀವಕ್ಕೆ ಆತ್ಮಸ್ವರೂಪ ಪ್ರಾಪ್ತಿಯಾಗುವದು ನಿಜ. ಪುರುಷನ ಹೃದಯದಲ್ಲಿ ವಿಷಯಗಳು ಸಮೂಲವಾಗಿ ನಾಶವಾಗಿ ಅವುಗಳ ಅಭಾವವಾಗಿರಬೇಕು; ಹಾಗು ಸರ್ವ ಭೂತಗಳಲ್ಲಿ ಭಗವದ್ಭಾವನವು ನೆಲೆಗೊಂಡಿರಬೇಕು. ಪ್ರತಿಯೊಂದು ಪ್ರಾಣಿಯೂ ಭಗವತ್ ಸ್ವರೂಪವೆಂತಲೇ ತಿಳಿಯಬೇಕು. ಹೀಗೆ ನಿರಸವಾದ ವೈರಾಗ್ಯಯುಕ್ತ ಭಕ್ತಿಯು ಹುಟ್ಟಿದರೆ ಜೀವಕ್ಕೆ ನನ್ನ (ಆತ್ಮ) ಸ್ವರೂಪ ಪ್ರಾಪ್ತಿಯಾಗುವದು. ವಸ್ತುತಃ ಜೀವವು ಆತ್ಮ ಸ್ವರೂಪವಾಗಿಯೇ ಇರುವದು. ಅದಕ್ಕೆ ಉಪಾಧಿಗಳಿಂದ ದೇಹಾಭಿಮಾನವು ಅಂಟಿಕೊಂಡು ಅದಕ್ಕೆ ಜೀವತ್ವವು ಬಂದಿರುವದು; ಆದರೆ ಸರ್ವ ಪ್ರಾಣಿಗಳಲ್ಲಿ ಆತ್ಮ ಸ್ವರೂಪವನ್ನು ಭಾವಿಸಲು, ಅಂದರೆ ಸರ್ವ ಭೂತಗಳೂ ಆತ್ಮ ಸ್ವರೂಪವೆಂದು ತಿಳಿಯಲು, ಅದಕ್ಕೆ ಸಿದ್ಧಾವಸ್ಥೆಯುಂಟಾಗಿ ಅದಕ್ಕೆ (ಜೀವಕ್ಕೆ) ಆತ್ಮ ಸ್ವರೂಪವು ಬರುವದು. ಜೀವಕ್ಕೆ ಹೀಗೆ ಆತ್ಮ ಸ್ವರೂಪ ಪ್ರಾಪ್ತಿಯಾಗಲು,

ಚಿತ್ತವು ಸಹಜವಾಗಿ ವಿಷಯುಗಳನ್ನು ಬಿಡುವದು; ಹಾಗು ವಿಷಯುಗಳು ಚಿತ್ತದಲ್ಲಿ ಪ್ರವೇಶಮಾಡಲಾರವು; ಯಾಕಂದರೆ, ಆತ್ಮಸ್ವರೂಪವಾದ ಜೀವಕ್ಕೆ ಚಿತ್ತ, ಹಾಗು ವಿಷಯುಗಳು ಸಹಜವಾಗಿಯೇ ಮಿಥ್ಯವಾಗಿ ಕಾಣುವವು. ಹಿಗೆ ಈ ತರದ ವೈರಾಗ್ಯಯುಕ್ತ ಭಕ್ತಿಯಿಂದ ಅಭಿಮಾನವು ಹೋಗಿ ಜೀವಕ್ಕೆ ನಿಜಾತ್ಮ ರೂಪವು ಬರಲು, ಅದು ತಾನು ವಿಷಯುತ್ಯಾಗ ಮಾಡದಿದ್ದರೂ ವಿಷಯು ಚಿತ್ತ ಗಳ ತ್ಯಾಗವು ಸ್ವಾಭಾವಿಕವಾಗಿಯೇ ಆಗುವದು.

ಬ್ರಹ್ಮಪುತ್ರರೇ, ನೀವು ಚಿತ್ತ ವಿಷಯುಗಳ ಪರಸ್ಪರತ್ಯಾಗವು ಹ್ಯಾಗೆ ಸಂಭವಿಸುವದೆಂದು ಪ್ರಶ್ನಮಾಡಿದ್ದೀರಿ, ಅದಕ್ಕೆ ನಾನು ನಿಮಗೆ ಇಲ್ಲಿಯುವರೆಗೆ ಅತ್ಯಂತ ಶುದ್ಧವಾದ ಜ್ಞಾನಮಾರ್ಗ ನ್ನು ಯಥಾಸಾಂಗವಾಗಿ ನಿರೂಪಣ ಮಾಡಿ ರುವೆನು. ಸಂದೇಹ:—ಚಿತ್ತ ವಿಷಯುಗಳ ತೋರುವಿಕೆಯೇ ಮಿಥ್ಯವಾಗಿ ದ್ದರೆ, ಜೀವಕ್ಕೆ ದೃಢವಾದ ಬಂಧನವು ಹತ್ತುವ ಕಾರಣವೇನೆಂಬದನ್ನು ನೀವು ನಡುವೇ ಕಲ್ಪನೆ ಮಾಡಿ ಪೂರ್ವಪಕ್ಷವನ್ನು ಮಾಡಬಹುದು; ಆದರೆ ಈ ಶಂಕೆಗೆ ಉತ್ತರವೇನಂದರೆ:—ಆಕಾಶ ಪುಷ್ಪಗಳ ಮಾಲೆಯುನ್ನು ಯಾರಾದರೂ ಕೊರ ಳಲ್ಲಿ ಧರಿಸುವರೋ ಹ್ಯಾಗೆ? ಮೃಗಜಲನಿಧಿಯಲ್ಲಿ ಹಡಗವು ಮುಳುಗುವ ದನ್ನು ಯಾರಾದರೂ ಕಣ್ಣಿನಿಂದ ನೋಡಿರುವರೇನು? ಸತ್ಯಕ್ಕೆ ಮಿಥ್ಯದ ಬಾಧೆಯು ಎಂದಿಗೂ ಆಗಲಾರದು. ಸತ್ಯಕ್ಕೆ ಬಾಧಕವಾದದ್ದು ಯಾವದು? ಎಂದು ನೀವು ಒಂದುವೇಳೆ, ಕಲ್ಪಿಸಿದರೆ, ನೀವು ಕಲ್ಪಕರೇ ಸರಿ. ಸತ್ಯಕ್ಕೆ ಮಿಥ್ಯದ ಬಾಧೆಯಾಗಲಾರದೆಂಬದಕ್ಕೂ ಉತ್ತರವನ್ನು (ನಿರ್ಣಯುವನ್ನು) ಹೇಳುವೆನು ಲಕ್ಷ್ಯಗೊಟ್ಟು ಕೇಳಿರಿ. ಜೀವಕ್ಕೆ ಬಂಧನವಿದೆಯೆಂಬದು ಅಸತ್ಯ ವಾದದ್ದೆಂಬದನ್ನೇ ಹೇಳುವೆನು ಕೇಳಿರಿ. ಜೀವಕ್ಕೆ ಸುಳ್ಳೇ ದೃಢವಾದ ಬಂಧ ನವು ಬಂದಿರುವದು.

ಅನಾದಿಯಾದ ಸಂಸಾರ ಮಾಲೆಯುಲ್ಲಿ ಈ ವರೆಗೆ ನಾವು ಅನೇಕ ಜನ್ಮಗ ಳನ್ನು ಪಡೆದು, ನಿತ್ಯದಲ್ಲಿಯೂ ವಿಷಯುಗಳನ್ನು ಅನುಭೋಗಿಸುತ್ತ ಬಂದಿರುವದ ರಿಂದ, ನಮ್ಮ ಚಿತ್ತದಲ್ಲಿ ಈ ವಿಷಯುಗಳು ಸ್ಥಿರವಾಗಿ ನೆಲೆಗೊಂಡಿರುವವು. ನಮ್ಮ ದೇಹವು ತನಗೆ ಬೇಕಾದ ವಿಷಯುಗಳನ್ನು ಸರ್ವದಾ ಸೇವಿಸುವದ ರಿಂದ ವಿಷಯುಗಳು ನಮ್ಮ ಚಿತ್ತದಲ್ಲಿ ದೃಢವಾಗಿ ಸೇರುವದು ಸಹಜವೇ ಆಗಿದೆ. ಚಿತ್ತಕ್ಕೆ ವಿಷಯುಗಳಲ್ಲಿ ಅತ್ಯಂತ ಪ್ರೀತಿಯು ಇರುವದರಿಂದ ಚಿತ್ತಕ್ಕೆ ವಿಷಯಾ ಸಕ್ತಿಯು ಹೆಚ್ಚಾಗುವದು. ಕೂಡಲೆ ಅದು ವಿಷಯುಗಳಲ್ಲಿ ಸೇರಿ ಅವುಗಳನ್ನು

ಬಿಟ್ಟು ಎಂದಿಗೂ ಹಿಂತಿರುಗಿವದಿಲ್ಲ ಬುದ್ಧಿಗೂ ವಿಷಯಗಳ ಧ್ಯಾನ; ಚಿತ್ತಕ್ಕೂ ವಿಷಯಗಳ ಚಿಂತನ; ಮನಸ್ಸೂ ಕೂಡ ವಿಷಯಗಳ ಸಲುವಾಗಿ ತಳಮಳಿಸುತ್ತ ಅವುಗಳಲ್ಲಿ ಅತ್ಯಾಸಕ್ತಿಯನ್ನಿಟ್ಟು, ಅವನ್ನು ಬಿಟ್ಟಿರಲಾರದು. ಹೀಗೆ ಚಿತ್ತ, ಮನಸ್ಸು, ಬುದ್ಧಿಗಳಿಗೆಲ್ಲ ವಿಷಯಗಳ ಅಭಿಮಾನವೇ ಬೆಳೆದಿರುವದು.

ವಿಷಯಗಳಲ್ಲಿ ಅಭಿಮಾನವು ಹೆಚ್ಚು ಬೆಳೆಯಲು, ಜೀವಕ್ಕೆ ದೇಹದ್ವಯದ ದೃಢವೂ, ಪರಮಕಠಿಣವೂ ಆದ ಬಂಧನವು ಹತ್ತುವದು, ಈ ಬಂಧನವು ಪರಮ ದುಸ್ತರವೂ ದಾರುಣವೂ ಆಗಿರುವದು. ಆ ಬಳಿಕ ಆ ದೇಹಗಳಿಂದುಂಟಾಗುವ ವಿಕಾರಗಳೆಲ್ಲ ತನ್ನವೆಂತಲೇ ಜೀವವು ನಿಶ್ಚಯವಾಗಿ ತಿಳಿಯುವದು. ತಾನೇ ಆ ವಿಕಾರಗಳನ್ನುಂಟು ಮಾಡಿರುವೆನೆಂದು ಅದು ಭಾವಿಸುವದು. ನಾನು ಅಂಧನು, ನಾನು ಕುಂಟನು, ನಾನು ಕುಷ್ಠರೋಗಿಯು, ನಾನು ಸ್ವರೂಪದಿಂದ ಸುಂದರನು, ನಾನು ಒಳ್ಳೇ ಬಲ್ಲಿದನು ಎಂದು ಆ ಜೀವವು (ದೇಹದ್ವಯಗಳ ಬಂಧನದಿಂದ) ತಿಳಿಯುವದು. ನಾನೇ ದೇಹವೆಂದು ತಿಳಿದು ಆ ಜೀವವು ತನ್ನ ನಿಜಸ್ವರೂಪವನ್ನು ಮರೆತು ಬಿಡುವದು. ಇದು ಜೀವಕ್ಕೆ ಮಿಥ್ಯವಾದ ಬಂಧನವು. ನಿಜವಾಗಿ ಅದಕ್ಕೆ ದೇಹದ್ವಯದ ಉಪಾಧಿಯಿಂದ ಅಭಿಮಾನವು ಹತ್ತಿರುವದು. ಬುದ್ಧಿಬಲದ (ಚತುರಂಗದ) ಆಟವು ಮಿಥ್ಯವಾದದ್ದೆಂದು ಎಲ್ಲರಿಗೂ ಗೊತ್ತುಂಟು. ಅದರಲ್ಲಿಯ ಸೋಲುಗೆಲವುಗಳು ನಿಷ್ಫಲವೇ ಸರಿ. ಹೀಗಿದ್ದರೂ ಚತುರಂಗವನ್ನು ಆಡುವವರ ಅಭಿಮಾನವು ಪ್ರಬಲವಾಗಿ 'ನಾನು ಗೆದ್ದೆನು', ನೀನು ಸೋತೆ' ಎಂದು ಆಡುವವರು ನುಡಿಯುವರು. ಇದರಂತೆ ಜೀವವು ದೇಹದ್ವಯಗಳ ಅಭಿಮಾನದಿಂದ ತಾನು ಇಲ್ಲದ ಕರ್ತೃತ್ವ ಭೋಕ್ತೃತ್ವಗಳ ಅಭಿಮಾನವನ್ನು ಹಚ್ಚಿಕೊಳ್ಳುವದು. ಚತುರಂಗದಲ್ಲಿಯ ಆನೆ ಒಂಟೆಗಳು ಮೊದಲೇ ಜೀವಂತವಾಗಿರುವದಿಲ್ಲ. ಅಥವಾ ಆಡುವವನು ಅವನ್ನು ಹೊಡೆದು ಕೊಂದೆನೆಂದು ಅಂದರೆ ಅವು ನಿಜವಾಗಿ ಸಾಯುವದಿಲ್ಲ. ಅವು ಮೊದಲೇ ಸಜೀವವಾಗಿದ್ದರೆ, ಅವು ಸಾಯುತ್ತಿದ್ದವು. ಬದುಕುತ್ತಿದ್ದವು. ಆದರೆ ಅವು ನಿರ್ಜೀವವಾಗಿದ್ದು, ಆಡುವವನು ಮಾತ್ರ 'ನಾನು ಆನೆ ಒಂಟೆಗಳನ್ನು ಹೊಡೆದು ಬಿಟ್ಟೆನೆಂ'ದು ಅಭಿಮಾನದಿಂದ ಸುಮ್ಮನೆ ಜಗಳಾಡುವನು. ಇದರಂತೆ, ಜೀವಕ್ಕೆ ಬದ್ಧಪರಂಪರೆಯ ಸಂಬಂಧವು; ವಸ್ತುತಃ ಜೀವಕ್ಕೆ ಎಷ್ಟೋ ಜನ್ಮಗಳು ಬಂದು ಹೋದರೂ, ಅದಕ್ಕೆ ಯಾವ ಲೇಪವೂ ಇರಬಾರದು. ಯಾಕೆಂದರೆ, ಜೀವವು ನಿಜವಾಗಿ ಚಿತ್ಸ್ವರೂಪವು; ಆದರೆ ಅದು ಅಭಿಮಾನದಿಂದ

ನಾನು ಇಂಥ ಜನ್ಮದಲ್ಲಿ ಒಂದು, ಇಂಥ ಕೃತ್ಯಗಳನ್ನು ಮಾಡಿದೆನು. ಇಂಥ ದೇಶದಲ್ಲಿ ಬಂದು ಸತ್ತೆನು, ಒದುಕಿದೆನು ಎಂಬ ವೃಥಾಹಂಕಾರ ಪಡೆಯುವದು; ಆದರೆ ಇದು ನಿಷ್ಫಲವಲ್ಲವೇ?

ಇಂಥ ಜೀವಬಂಧನವನ್ನು ನಿರಸನ ಮಾಡಬೇಕಾದರೆ, ಪುರುಷನು ನಿಃಶೇಷವಾಗಿ ದೇಹಾಭಿಮಾನವನ್ನು ಬಿಟ್ಟುಬಿಡಬೇಕು. ಜೀವವು ಈ ತರದ ಅಭಿಮಾನವನ್ನು ಬಿಡುವದೊಂದೇ ತಡ, ಅದಕ್ಕೆ ಆತ್ಮಸ್ವರೂಪವು ಸಹಜವಾಗಿ ಪ್ರಾಪ್ತವಾಗುವದು. ಹೀಗೆ ಜೀವಕ್ಕೆ ಆತ್ಮಸ್ವರೂಪವು ಬರಲು, ವಿಷಯಚಿತ್ತ ಗಳ ಪರಸ್ಪರ ತ್ಯಾಗವು ಸಹಜವಾಗಿಯೇ ಜೀವಕ್ಕೆ ಸಂಭವಿಸುವವು. ನನ್ನ (ಆತ್ಮ) ಸ್ವರೂಪದಲ್ಲಿ ಅಹಂತೆಯೂ ಇರುವದಿಲ್ಲ. ಹಾಗು ವಿಷಯಗಳ ಸುದ್ದಿ ಯೂ ಅಲ್ಲಿ ಇರಲಾರದು. ಬುದ್ಧಿಬಲದ (ಚತುರಂಗದ) ಆಟವು ಮುಗಿದ ಕೂಡಲೆ, ಅದರಲ್ಲಿ ಮೊದಲು ಇದ್ದ ರಾಜಾ-ಪ್ರಧಾನಾದಿಗಳು ಕೇವಲ ಕಟ್ಟಿ ಗೆಯ ವಿಶಿಷ್ಟ ಆಕಾರಗಳೇ ಆಗಿ ಉಳಿಯುವವು. (ಮೊದಲು ಕಟ್ಟಿಗೆಯಿಂದ ಕೆಲವು ಆಕಾರಗಳನ್ನು ಮಾಡಿ ಚತುರಂಗದ ಆಟದಲ್ಲಿ ಅವುಗಳಿಗೆ ರಾಜಾ, ಪ್ರಧಾನ, ಪ್ಯಾದೆ ಎಂಬಿವೇ ಮೊದಲಾದ ಹೆಸರುಗಳನ್ನು ಇಡುವರು) ಇದರಂತೆ ಅಹಂಕಾ ರವು ನಾಶವಾಗಿ ಲಯಹೊಂದಲು, ಪ್ರಪಂಚವು ಮಿಥ್ಯವಾಗಿರುವದರಿಂದ ನಾಶ ವಾಗಿ ಹೋಗುವದು ಸ್ವಪ್ನದಲ್ಲಿ ನನ್ನ ಹೆಂಡತಿ, ನನ್ನ ಮಕ್ಕಳು, ನನ್ನ ಪರಿ ಜನರು, ನನ್ನ ಆಪ್ತೇಷ್ಟರು, ನನ್ನ ಧನವು ಎಂದು ವೃಥಾ ಸ್ವಪ್ನಾಭಿಮಾನವು ಪುರುಷನ ದೇಹಕ್ಕೆ ಅಂಟಿಕೊಳ್ಳುವದು ಆದರೆ ಅವನು ಎಚ್ಚರಾದ ಕೂಡಲೆ ಜಾಗ್ರತಾವಸ್ಥೆಯು ಅವನಿಗೆ ನಿಜವಾದ ಜ್ಞಾನವುಂಟಾಗಿ, ಸ್ವಪ್ನದಲ್ಲಿ ತನ್ನ ದೇಹಕ್ಕೆ ಉಂಟಾದ ವೃಥಾಸ್ವಪ್ನಾಭಿಮಾನವು ಸತ್ಯವಾಗಿ ಕಂಡು ನಾಶವಾಗುವದು. ಇದರಂತೆ ಜೀವಕ್ಕೆ ನಿಜಾತ್ಮಸ್ವರೂಪವು ಪ್ರಾಪ್ತವಾಗಲು, ಅದಕ್ಕೆ ದೇಹವಿಲ್ಲ, ಅಹಂಕಾರವೆಲ್ಲಿ ಉಳಿಯುವದು? ಯಾಕಂದರೆ ಸ್ವಸ್ವರೂಪದಲ್ಲಿ ದೇಹಾಹಂಕಾರ ಗಳೇ ಇರುವದಿಲ್ಲ. ಆತ್ಮಸ್ವರೂಪದಲ್ಲಿ ವಿಷಯ ಹಾಗು ಚಿತ್ತಗಳ ಸುದ್ದಿಯೇ ಇರುವದಿಲ್ಲ ಮತ್ತು ಗುಣತ್ರಯಗಳ ಅವಸ್ಥೆಯೂ ತೋರಿಬರುವದಿಲ್ಲ. "ಆಶಂಕೆ:—ಮೂರು ಅವಸ್ಥೆಗಳಲ್ಲಿ ಇರುವ = ಜಾಗ್ರತಿ ಸ್ವಪ್ನ ಸುಷುಪ್ತಿ ಈ ಮೂರೂ ಅವಸ್ಥೆಗಳುಳ್ಳ ಜೀವವು ಹ್ಯಾಗೆ ಅವಸ್ಥಾತೀತವಾಗುವದು? ಅವಸ್ಥಾ ಭೂತಜೀವವು ಅವಸ್ಥಾರಹಿತವಾಗಿ ಹ್ಯಾಗೆ ಆಗುವದು? ಮತ್ತು ಅದು ಪರಮಾ ತ್ಮನಲ್ಲಿ ಹ್ಯಾಗೆ ಕೂಡುವದು?" ಎಂದು ನಿಮ್ಮ ಮನಸ್ಸಿನಲ್ಲಿ ವಿಚಾರವನ್ನು

ಕಲ್ಪಿಸಿದರೆ ಅದಕ್ಕೆ ಉತ್ತರವೇನಂದರೆ:—"ಜೀವಕ್ಕೆ ಅವಸ್ಥೆಗಳಿಲ್ಲ. ಅದು ಸತ್
ಸ್ವರೂಪವಾಗಿರುವ ಕಾರಣ ಅದರಲ್ಲಿ ಜಾಗ್ರತ್ಯಾದಿ ಮೂರು ಅವಸ್ಥೆಗಳ ಅಭಾ
ವವೇ ಕಂಡು ಬರುವದು. ಹಾಗು ಅಲ್ಲಿ ತ್ರಿಗುಣಗಳೂ ಆ ಗುಣಗಳ ಸ್ವಭಾ
ವವೂ ಇರುವದಿಲ್ಲ, ಇವೆಲ್ಲ ಬುದ್ಧಿಯ ವೃತ್ತಿಗಳು.

## ಮೂರು ಅವಸ್ಥೆಗಳಲ್ಲಿ ಜೀವದ ಸಾಕ್ಷಿತ್ವವು.

ಸತ್ವ, ರಜ, ತಮ ಈ ಮೂರು ಗುಣಗಳಿಗೆ ಮೂರು ವೃತ್ತಿಗಳು
ಸತ್ವ ಗುಣದ ಅವಸ್ಥೆಯು ಜಾಗ್ರತೆಯು; ಸುಷುಪ್ತ್ಯಾವಸ್ಥೆಯು ಕೇವಲ ತಮೋ
ಗುಣದ್ದು; ರಜೋ ಗುಣದ ಅವಸ್ಥೆಯು ಸ್ವಪ್ನಾವಸ್ಥೆಯು. ಈ ಮೂರು
ಅವಸ್ಥೆಗಳು ಬುದ್ಧಿಯಲ್ಲಿ ದೃಢವಾಗಿ ನೆಲೆಗೊಳ್ಳುವವೇ ಹೊರತು ಜೀವಕ್ಕೆ ಇವು
ಗಳ ಸಂಬಂಧವೇ ಇರುವದಿಲ್ಲ. ಜೀವವು ಈ ಅವಸ್ಥೆಗಳಿಂದ ಭಿನ್ನವಾಗಿದ್ದು
ಅದು ಅವುಗಳಿಗೇ ಸಾಕ್ಷೀಭೂತವಾಗಿರುವದು. ಜೀವನಲ್ಲಿ ಈ ಅವಸ್ಥೆಗಳ
ಲೋಪವಾದಾಗ ಅದು ಆ ಅವಸ್ಥೆಗಳಲ್ಲಿ ಮುಳುಗುವದು. ಆಗ ಅದಕ್ಕೆ ಸಾಕ್ಷಿ
ತ್ವವು ಬರುವದಿಲ್ಲ. ಹೀಗೆ ಅವಸ್ಥೆಗಳ ನಿರ್ಣಯ ವಾಗಿದೆ. ಜಾಗ್ರತಿಯಲ್ಲಿ ಸ್ವಪ್ನ
ವಿರುವದಿಲ್ಲ; ಮತ್ತು ಸ್ವಪ್ನವು ಜಾಗ್ರತಿಯನ್ನು ತಿಳಿಯಲಾರದು. ಸುಷುಪ್ತಿಗೆ
ಜಾಗ್ರತಿ-ಸ್ವಪ್ನಗಳ ಅರುವು ಇರುವದಿಲ್ಲ; ಮತ್ತು ಸುಷುಪ್ತಿಯುಎಚ್ಚರಿಕೆಯೂ
ಅವುಗಳಿಗೆ ಇರುವದಿಲ್ಲ. ಜೀವವು ಅವಸ್ಥೆಗಳ ಅಭಿಮಾನಿಯೆಂದರೂ ಸಲ್ಲುವದಿಲ್ಲ;
ಯಾಕಂದರೆ ಅವಸ್ಥೆಗಳು ಬುದ್ಧಿಯವು. ಅವು ಜೀವಕ್ಕೆ ಸಂಬಂಧವಿಲ್ಲ. ವಿಶ್ವ
(ನಾನೇ ಈ ದೇಹವು, ಈ ವಿಷಯಗಳು ನನ್ನವು, ಎಂದು ಜಾಗ್ರತಿಯಲ್ಲಿ ಅಭಿ
ಮಾನವನ್ನು ತಾಳುವ ಜೀವಕ್ಕೆ ವಿಶ್ವವೆಂಬ ಹೆಸರು ಇರುವದು) ತೈಜಸ (ಸ್ವಪ್ನ
ದೇಹದ ಅಭಿಮಾನಿಯಾದ ಜೀವಕ್ಕೆ ತೈಜಸವೆಂದೆನ್ನುವರು) ಪ್ರಾಜ್ಞ (ಸುಷುಪ್ತಿ
ದೇಹದ ಅಭಿಮಾನಿಯು ಜೀವವು ಪ್ರಾಜ್ಞನು) ಇವು ಮೂರೂ ಜಾಗ್ರತಿ ಸ್ವಪ್ನ
ಸುಷುಪ್ತಿಗಳೇಮೊದಲಾದ ಅವಸ್ಥೆಗಳ ಅಭಿಮಾನಿಗಳು. ಈ ಮೂರು ಜೀವ
ಗಳಲ್ಲಿ ಯಾವದು ಯಾವ ಅವಸ್ಥೆಯ ಅಭಿಮಾನಿಯಾಗಿರುವದೋ, ಅದು ಆ
ಅವಸ್ಥೆಯ ಸಂಗಡ ಲೀನವಾಗಿ ಹೋಗುವದು. ಆದರೆ ಜೀವವು ಮಾತ್ರ ಆ
ಅವಸ್ಥೆಗಳಿಂದ ಭಿನ್ನವಾಗಿದ್ದು, ಆ ಅವಸ್ಥೆಗಳಲ್ಲಿ ಸಾಕ್ಷೀಭೂತವಾಗಿರುವದು.
ಜೀವವು ಈ ಮೂರೂ ಅವಸ್ಥೆಗಳ ಸಾಕ್ಷಿಯಾಗಿದ್ದು, ಅವಸ್ಥಾತೀತವಾಗಿರು
ವದು. ಅದು ಅವಸ್ಥಾಭಿಮಾನಿಯಲ್ಲ. ಜೀವವು ದೇಹಾತೀತವೂ, ಗುಣಾ

ತೀತವೂ, ಅವಸ್ಥಾತೀತವೂ ಆಗಿದ್ದು, ಅದು ದೃಷ್ಟಾರ (ನೋಡುವವನು) ಸಾಕ್ಷಿಭೂತ, ಸರ್ವಜ್ಞ ಆಗಿರುವದು.

ಸಂದೇಹ:—ಈ ಜೀವಕ್ಕೆ ಅವಸ್ಥಾಭಿಮಾನವು ಇರುವದಿಲ್ಲವೆಂದು ಹೇಳು ವಿರಿ. ಆದರೆ ಮೇಲೆ ಹೇಳಿದ ಮೂರೂ ಅವಸ್ಥೆಗಳನ್ನು ಭೋಗಿಸುವವರು ಯಾರು? ನಾನು ಮಲಗಿಕೊಂಡೆನು; ನಾನು ಎಚ್ಚತ್ತೆನು; ನಾನು ಸ್ವಪ್ನವನ್ನು ನೋಡಿದೆನು, ಎಂಬದು ಪ್ರತ್ಯಕ್ಷ ಅನುಭವಕ್ಕೆ ಬರುವದು; ಮತ್ತು ಜೀವವು ತಾನು ಸ್ವಂತ ಹೀಗೆ ಮಾತಾಡುವದು." ಎಂದು ಶಂಕೆಯನ್ನು ತಂದರೆ ಅದಕ್ಕೆ ಸಮಾಧಾನವನ್ನು ಹೇಳುವೆನು, ಕೇಳಿರಿ. ಜೀವದ ಸ್ವಭಾವವನ್ನು ನಿರೂಪಿಸುವೆನು, ಕೇಳಿರಿ.

## ಅಹಂಮಮತೆಗಳಿಂದ ಸಂಸಾರ ಬಂಧನವು.

ತೂಗಮಂಚದ ಮೇಲೆ ಯಥಾಸೌಖ್ಯವಾಗಿ ಕುಳಿತವನು ತಾನು ಸ್ವಂತ ಅಲ್ಲಾಡದಿದ್ದರೂ, ಮಂಚವು ತೂಗಾಡುವದರಿಂದ ಅವನಿಗೆ ತಾನೇ ತೂಗಾಡುವೆನೆಂಬ ಭಾಸವಾಗಿ ಅವನು ಅದರಿಂದ ಹರ್ಷಪಡುವನು. ಮಂಚವು ತೂಗಾಡುವಾಗ ಒಮ್ಮೆ ಅದು ಮೇಲಕ್ಕೆ ಹೋಗುವದು, ಒಮ್ಮೆ ಕೆಳಗೆ ಕಾಣುವದು. ಇದರಂತೆ ಅದರ ಮೇಲೆ ಕುಳಿತವನು ಈ ತರದ ಮಂಚದ ತೂಗಾಡುವಿಕೆಯಿಂದ ಒಮ್ಮೆ ಮೇಲೆ ಮತ್ತೊಮ್ಮೆ ಕೆಳಗೆ ಹೋಗಿ ಬರುವನು. ಹೀಗೆ ಅವನು ತಾನು ಹಿಂದೆ-ಮುಂದೆ ತೂಗಾಡುವದನ್ನು ನೋಡಿ ಕೌತುಕಪಡುವನು. ಮಂಚದ ಮೇಲೆ ಕುಳಿತವನು, ಒಳ್ಳೇ ಬಲವಾಗಿ ಹಿಂದಕ್ಕೆ ಮುಂದಕ್ಕೆ ತೂಗಾಡಿದರೂ ತೂಗುವ ಮಂಚವೇ ಅತಿ ಚಂಚಲವಾಗಿ ಹಿಂದೆ ಮುಂದೆ ತೂಗಾಡುವದೇ ಹೊರತು, ಅದರ ಮೇಲೆ ಕುಳಿತವನೇನೂ ಅಲ್ಲಾಡುವದಿಲ್ಲ. ಅದರ ಮೇಲೆ ಕುಳಿತವನು ತಾನು ಮಂಚದ ಮೇಲೆ ನಿಶ್ಚಲವಾಗಿ ಕುಳಿತಿದ್ದರೂ, ಮಂಚದ ಜೋಲಿಯಿಂದ ತಾನೇ ಹಿಂದೆ-ಮುಂದೆ ಅಲ್ಲಾಡುವೆನೆಂದು ಅವನಿಗೆ ಭಾಸವಾಗುವದು. ಇದರಂತೆ ಜೀವದ ಸ್ಥಿತಿಯಾಗಿರುವದು ಅದಕ್ಕೆ (ಜೀವಕ್ಕೆ) ತನ್ನ ಸ್ವರೂಪಜ್ಞಾನದ ಕೊರತೆಯುಂಟಾಗಿರುವದು. ಜೀವವು ಅಹಂಮಮತೆಗಳ ಅಭಿಮಾನಕ್ಕೆ ಒಳಗಾದ್ದರಿಂದ, ಜಾಗ್ರತಿ-ಸ್ವಪ್ನ-ಸುಷುಪ್ತಿ ಈ ಮೂರು ಅವಸ್ಥೆಗಳನ್ನು ತಾನೇ ಭೋಗಿಸುವವನೆಂತಲೂ, ಅವು ತನಗೆ ಸಂಬಂಧಿಸಿರುವವೆಂತಲೂ ತಿಳಿಯುವನು. ಕಬ್ಬಿಣದ ಒಂದು ಪದಾರ್ಥವನ್ನು ಮಾಡಬೇಕಾದರೆ, ಕಮ್ಮಾರನು ಮೊದಲು ಕಬ್ಬಿಣವನ್ನು ಬೆಂಕಿಯಲ್ಲಿ ಹಾಕಿ ಕಾಸುವನು. ಕಬ್ಬಿಣವು

ಕಾದು ಕೆಂಪಾದ ಕೂಡಲೆ, ಅದನ್ನು ತನ್ನ ಸುತ್ತಿಗೆಯಿಂದೆ ಬಡಿದು, ಬೇಕಾದ ವಸ್ತುವನ್ನು ಮಾಡುವನು. ಆಗ ಕಮ್ಮಾರನು ತನ್ನ ಸುತಿಗೆಯಿಂದ ಹೊಡೆಯುವ ಪೆಟ್ಟು, ಮೊದಲು ಕಬ್ಬಿಣಕ್ಕೆ ಹತ್ತಿದ ಅಗ್ನಿಯ ತಲೆಯ ಮೇಲೆ ಬೀಳುವದೆಂಬದು ಪತ್ಯಕ್ಷವಾಗಿ ಕಾಣುವದು. ಲೋಹತಾದಾತ್ಮನಾ ಸಂಯೋಗದಿಂದ (ಕಬ್ಬಿಣವು ಅಗ್ನಿಯಲ್ಲಿ ಬಿದ್ದ ಅದರ ಸಂಸರ್ಗದಿಂದ ಅಗ್ನಿ ತಾದಾತ್ಮವನ್ನು= ಅಗ್ನಿಯು ತಾನು ಏಕರೂಪವಾಗಿದ್ದರಿಂದ) ಕಬ್ಬಿಣಕ್ಕೆ ಹೊಡೆಯುವ ಪೆಟ್ಟು, ಅಗ್ನಿಗೆ ಬೀಳುವಂತೆ ಕಾಣುವದು.

ಅಗ್ನಿಯ ಸಂಸರ್ಗದಿಂದ, ಕಬ್ಬಿಣದ ಕೆಲಸವು ಒಮ್ಮೆ ಚನ್ನಾಗಿ ಆಗುವದು, ಮತ್ತೊಮ್ಮೆ ಮುರಿದು ಹೋಗುವದು. ಅಗ್ನಿಯಿದ್ದ ಹೊರತು ಕಬ್ಬಿಣದ ಪದಾರ್ಥಗಳು ಆಗಲಾರವು. ಕಬ್ಬಿಣವು ಅಗ್ನಿಯ ಸಂಸರ್ಗವನ್ನು ಹೊಂದಿದ ಪ್ರಮಾಣದಂತೆ ಕಬ್ಬಿಣದ ಕೆಲಸವು ಗಟ್ಟಿಯಾಗುವದು, ಅಥವಾ ಮುರಿಯುವದು; ಆದರೆ ಅಗ್ನಿಗೆ, ಕಬ್ಬಿಣದ ಈ ಘಡಾಮೋಡಗಳು ಸಂಬಂಧಿಸಿರುವದಿಲ್ಲ. ಇದರಂತೆ, ಜೀವದ ಸ್ಥಿತಿಯಾಗಿರುವದು. ಅಗ್ನಿಯ ಸಂಗವಿಲ್ಲದೆ ಕಬ್ಬಿಣದ ಕೆಲಸಗಳು ಆಗುವದಿಲ್ಲ. ಅದರಂತೆ ಆತ್ಮಸಂಯೋಗವಿಲ್ಲದೆ ಬುದ್ಧಿಯು ಕೇವಲ ಜಡವಾಗಿ ಅದಕ್ಕೆ ಹುಚ್ಚು ಹಿಡಿಯುವದು; ಅದು ಯಾವ ಕರ್ಮಕ್ರಿಯೆಗಳನ್ನೂ ಮಾಡಲಾರದು. ಲೋಹದ ಪದಾರ್ಥಗಳ ನಿರ್ಮಾಣಕ್ಕೆ ಅಗ್ನಿಯೇ ಮುಖ್ಯ ಕಾರಣವಾಗಿದ್ದರೂ, ಅಥವಾ ಅಗ್ನಿಯೇ ಲೋಹಕಾರ್ಯವನ್ನು ಘಟಿಸಿದ್ದರೂ, ಅಗ್ನಿಯು ತಾನು, ಆ ಲೋಹಕಾರ್ಯ ಕರ್ತನಾಗಲಾರದು. ಅದರಂತೆ ಜೀವಾತ್ಮವು ಕರ್ಮಗಳನ್ನು ಮಾಡಿಸಲಿಕ್ಕೆ ಮುಖ್ಯ ಕಾರಣವಾದರೂ, ತಾನು ಅಕರ್ತನಾಗಿರುವದು. ಆದರೂ ವೃತ್ತಿಸಂಗದಿಂದ ಜೀವಕ್ಕೆ ಅದರ (ವೃತ್ತಿಯು) ತಾದಾತ್ಮ್ಯವು ಪ್ರಾಪ್ತವಾಗಿ, ನಾನೇ ಕರ್ತೃವೆಂಬ ಅಹಂಕಾರವು ಅದಕ್ಕೆ ಬರುವದು. ಜೀವವು ವೃತ್ತಿಗೆ ಪ್ರಕಾಶ ಮಾಡುವಾಗಲೇ ಅದು ತನ್ನಷ್ಟಕ್ಕೆ ತಾನೇ ಪ್ರಕಾಶಮಯವಾಗಿರುವದು. ಜೀವವು ತಾನೇ ಅನ್ಯವಸ್ತುಗಳಿಗೆ ಪ್ರಕಾಶವನ್ನು ಕೊಡುವದು. ಪ್ರಕಾಶಿತವಾಗಿ ಮಾಡುವದು ಅದರಂತೆ ಅದು ವೃತ್ತಿಗೂ ಪ್ರಕಾಶಿತವಾಗಿ ಮಾಡುವದು. ವೃತ್ತಿಯು ಜೀವಕ್ಕೆ ನಾನಾ ಅವಸ್ಥೆಗಳನ್ನು ನಿಜಸ್ವಭಾವಕ್ಕೆ ಅನುಸರಿಸಿ ಕೊಡುವದು. ಸೂರ್ಯನು ತಾನು ಅನ್ಯವಸ್ತುಗಳಿಗೆ ಪ್ರಕಾಶ ಕೊಡುವವನಷ್ಟೇ. ಅವನು ನೀರಿಗೂ ತನ್ನ ಪ್ರಕಾಶವನ್ನು ಕೊಟ್ಟು ಅದನ್ನು ಪ್ರಕಾಶಿತವಾಗಿ

ಮಾಡುವನು. ಜಲವನ್ನು ತನ್ನ ಪ್ರತಿಮಂಡಲ (ಪ್ರತಿಬಿಂಬ) ವನ್ನೇ ಆಗಿ ಮಾಡುವನು. ಅಂದರೆ ಜಲದಲ್ಲಿ ಸೂರ್ಯನ ಪ್ರತಿಬಿಂಬವು ಬೀಳುವದು. ನೀರು ವಾಯುಯೋಗದಿಂದ ಒಮ್ಮೆ ಚಂಚಲವಾಗಿ ಅಲ್ಲಾಡುವದು, ಮತ್ತೊಮ್ಮೆ ನಿಶ್ಚಲವಾಗಿ ಅಲ್ಲಾಡುವದಿಲ್ಲ ನೀರು ಅಲ್ಲಾಡುತ್ತಲೇ ನೀರಿನಲ್ಲಿ ಬಿದ್ದ ಸೂರ್ಯನ ಪ್ರತಿಬಿಂಬವೂ ಅಲ್ಲಾಡುವದು. ನೀರು ನಿಶ್ಚಲವಾದ ಕೂಡಲೆ ಪ್ರತಿಬಿಂಬವೂ ನಿಶ್ಚಲವಾಗುವದು. ಸೂರ್ಯನ ವಸತಿಯು ನಿತ್ಯದಲ್ಲಿಯೂ ಆಕಾಶದಲ್ಲಿ ಇರುವದು; ಆದರೆ ಕೆಳಗೆ ಭೂಮಿಯಲ್ಲಿರುವ ನೀರಿನಲ್ಲಿ (ಪ್ರತಿಬಿಂಬರೂಪದಿಂದ) ಯಾವ ಪ್ರಕಾರ ಬಂದಿರುವನೋ, ಅದರಂತೆ ಕೇವಲ ಉಚ್ಚಸ್ಥಿತಿಯಲ್ಲಿರುವ ಮುಕ್ತಸ್ಥಿತಿಯ ಪುರುಷನನ್ನೂ ವೃತ್ತಿಯು ಬದ್ಧನನ್ನಾಗಿ ಮಾಡುವದು. ಇದು ವೃತ್ತಿಯ ಪ್ರಖ್ಯಾತವಾದ ಕಾರ್ಯವು ಆತ್ಮವು ವೃತ್ತಿಗಳನ್ನು ಪ್ರಕಾಶಿತವಾಗಿ ಮಾಡಿ, ಅದರಲ್ಲಿ ಪ್ರಕಾಶವನ್ನು ಕೊಟ್ಟಿತು ವೃತ್ತಿಯಿಂದ ಆತ್ಮನಿಗೆ ಜೀವದೆಸೆಯು ಪ್ರಾಪ್ತವಾಗಿರುವದು. ಜೀವಕ್ಕೆ ಜೀವತ್ವದ ಯೋಗದಿಂದ ದೇಹಾಸಕ್ತಿಯು ಸಹಜವಾಗಿ ಹುಟ್ಟುವದು ಅದರಿಂದ ಅದಕ್ಕೆ (ಜೀವಕ್ಕೆ) ಸುಖ-ದಃಖಗಳ ಪ್ರಾಪ್ತಿಯಾಗಿ ಅದು ಅವುಗಳನ್ನು ಭೋಗಿಸುವದು. ಈ ಪ್ರಕಾರ ವೃತ್ತಿಯ ಸಂಗತಿಯಿಂದ ವಿಷಯಗಳಲ್ಲಿ ಜೀವಕ್ಕೆ ದೇಹಪ್ರೀತಿಯು ಹುಟ್ಟುವದು. ಅದರಿಂದ ಜೀವಕ್ಕೆ ಸಂಸಾರಬಂಧನ ಪ್ರಾಪ್ತಿಯಾಗುವದು ನಿಶ್ಚಯವು.

## ತುರ್ಯಾನುಭವದಿಂದ ಚಿತ್ತದ ಹಾಗು ವಿಷಯಗಳ ಅನ್ಯೋನ್ಯ ವಿಯೋಗವು.

ಜೀವಕ್ಕೆ ಗುಣ (ಸತ್ವ-ರಜ-ತಮೋಗುಣಗಳು) ಚಿತ್ತ, ವಿಷಯಗಳು ಇವುಗಳಲ್ಲಿಯ ಆಸಕ್ತಿಯಿಂದ ಸಂಸಾರ ಬಂಧನ ಪ್ರಾಪ್ತಿಯಾಗಿದ್ದರೂ, ಅದಕ್ಕೆ ಅವುಗಳ ಆಸಕ್ತಿಯಿಂದ ಪಾರಾಗಲಿಕ್ಕೆ ಮಾರ್ಗವಿದೆ. ಜೀವವು ಗುಣ-ವಿಷಯ-ಚಿತ್ತಗಳಲ್ಲಿಯ ಆಸಕ್ತಿಯಿಂದ ಪಾರಾಗಲಿಕ್ಕೆ ಬೇಕಾದರೆ, ನಾವು ಗುರುಕೃಪೆಯನ್ನು ಮೊದಲು ಪಡೆದು, ಅವನಿಂದ (ಗುರುವಿನಿಂದ) ನಿತ್ಯಾನಿತ್ಯ ವಿವೇಕ ಯುಕ್ತವಾದ ವೈರಾಗ್ಯ ಸಂಪಾದನ ಮಾಡಿ. ಈ ಯುಕ್ತಿಗಳಿಂದ ವಿಷಯ ವೃತ್ತಿಯನ್ನು ನಿಗ್ರಹಿಸಬೇಕು. ಗುರುಕೃಪೆಯ ಮಾತನ್ನು ಹೇಳುವೆನು ಕೇಳಿರಿ. ನಾನು (ಆತ್ಮವು) ಜಾಗೃತ್ಯಾದಿ ಮೂರು ಅವಸ್ಥೆಗಳಲ್ಲಿಯೂ ನಿರಂತರವಾಗಿರುವೆನು ನಾನು ಜ್ಞಾನಸ್ವರೂಪನೂ, ಗುಣಾತೀತನೂ ಆಗಿರುವೆನು. ಇಂಥ ಪರಮಾತ್ಮನಾದ

ನನ್ನ ಧ್ಯಾಸವನ್ನು ಮಾಡುವ ಅಭ್ಯಾಸವು ಶಿಷ್ಯನಿಗೆ ಅವಶ್ಯವಾಗಿರುವದರಿಂದ ಸದ್ಗುರುವು ತನ್ನ ಶಿಷ್ಯನಿಗೆ ಆತ್ಮಬೋಧವನ್ನು ಮಾಡಿ, ಅವನಿಗೆ ಜ್ಞಾನಸ್ವರೂಪನೂ, ಗುಣಾತೀತನೂ, ಸಾಕ್ಷಿಭೂತನೂ ಆದ ಪರಮಾತ್ಮನನ್ನು ನಿರಂತರವಾಗಿ ಚಿಂತನಮಾಡುವ ಅಭ್ಯಾಸಕ್ಕೆ ಹಚ್ಚುವನು ನಾನು (ಪರಮಾತ್ಮನು) ತುರೀಯನೂ, (ಜ್ಞಾನಸ್ವರೂಪನೂ) ಸರ್ವವ್ಯಾಪಕನೂ ಆಗಿರುವೆನೆಂಬ ಜ್ಞಾನವನ್ನೇ ಗುರುವು ಶಿಷ್ಯನಿಗೆ ಬೋಧಿಸುವನು. ಪರಮಾತ್ಮನು ಸರ್ವಾಂತರ್ಯಾಮಿಯಾಗಿ ತನ್ನಲ್ಲಿಯೇ (ಅಂತರಂಗದಲ್ಲಿಯೇ) ಇರುವನೆಂಬ ಜೀವಾತ್ಮೈಕ್ಯ ತತ್ವವೇ ನಿಜವಾದ ಶಿಷ್ಯನ ಸ್ವಾರ್ಥವು. ಇಂಥ ಸ್ವಾತ್ಮಾನುಭವವನ್ನು ಗುರುವು ಶಿಷ್ಯನಿಗೆ ತೋರಿಸುವನು. ಪರಮಾತ್ಮ ಸ್ವರೂಪದ ನಿರಂತರ ಧ್ಯಾನದಿಂದ ಶಿಷ್ಯನಿಗೆ ಆತ್ಮದ ಸ್ವಾನುಭವವು ಪ್ರಾಪ್ತವಾಗುವದು. ಆಗ ಅವನ ಸ್ಥಿತಿಯು ಹೇಗೆ ಆಗುವದೆಂಬದನ್ನು ಕೇಳಿರಿ.

ಸೀರೆಯು ಅನೇಕ ಧಾರಗಳಿಂದ ಕೂಡಿಯೇ ಆಗಿರುವದರಿಂದ ಸೀರೆಯಲ್ಲಿ ಧಾರಗಳೇ ಎತ್ತ ನೋಡಿದತ್ತ ಕಾಣುವವು. ಧಾರಗಳು ಸೀರೆಯನ್ನು ಬಿಟ್ಟಿರುವದಿಲ್ಲ. ಸೀರೆಯು ಧಾರಗಳನ್ನು ಬಿಟ್ಟಿರುವದಿಲ್ಲ ಅನೇಕ ಧಾರಗಳಿಂದ ಕೂಡಿದ ಪಟಕ್ಕೆ ಸೀರೆಯೆಂದೆನ್ನುವರು ಮಾತ್ರ. ಆದರೆ ಆ ತಂತುಗಳಿಂದ ಸೀರೆಯನ್ನು ಬೇರೆ ಮಾಡಬೇಕೆಂದರೆ, (ಧಾರಗಳನ್ನು ಬಿಟ್ಟು ಸೀರೆಯನ್ನೇ ಬೇರೆ ವಿಂಗಡಿಸಬೇಕೆಂದರೆ) ಅದು ಅಸಾಧ್ಯವಾದ ಮಾತು. ಯಾಕಂದರೆ ಸೀರೆಯಲ್ಲಿ ಮೊದಲಿನಿಂದ ಕಡೆತನಕ ತಂತುಗಳೇ ಇರುವವು. ಇದರಂತೆ ಸಾಧಕನ ಸ್ಥಿತಿಯಾಗಿರುವದು. ಗುರುಕೃಪೆಯಿಂದ ಅವನಿಗೆ ಆತ್ಮಸ್ವರೂಪವೇ ಸರ್ವತ್ರದಲ್ಲಿ ಕಾಣುವದರಿಂದ ವಿಷಯಗಳಾದರೂ ಅಭ್ಯಾಸದಿಂದ ಅವನಿಗೆ ಆತ್ಮರೂಪವಾಗಿಯೇ ಕಾಣುವವು. ವಿಷಯುಗಳ ವಿಷಯಭಾಗವಾದರೂ ನನ್ನ (ಪರಮಾತ್ಮನ) ಸ್ವರೂಪದಿಂದ ಭಿನ್ನವಾಗಿರುವದಿಲ್ಲೆಂತಲೂ, ಚೈತನ್ಯಘನನಾದ ಪರಮಾತ್ಮನೇ (ನಾನೆಂತಲೂ) ತನ್ನಲ್ಲಿದ್ದು, ತಾನೇ ಆತನೆಂತಲೂ, ಎಂಬ ಆತ್ಮೈಕ್ಯತೆಯನ್ನು ಪಡೆದು ತಿಳಿಯುವನು. ಈ ಅಖಂಡವಾದ ಆತ್ಮೈಕ್ಯ ಸ್ಥಿತಿಯಲ್ಲಿ (ಸ್ವಸ್ವರೂಪದಲ್ಲಿ ವೃತ್ತಿಯು ಪೂರ್ಣವಾಗಿ ಲೀನವಾದ ಸ್ಥಿತಿಯಲ್ಲಿ) ನಾಮ, ರೂಪ, ವರ್ಣಭೇದಗಳಿರುವದಿಲ್ಲ ಕರ್ಮಗಳು-ಕೃತ್ಯಗಳು ಸಹ ಕೂಡ ಇರುವದಿಲ್ಲ ವೇದವಾದವಂತೂ ಮುಳುಗಿ ಹೋಗುವದು ವೇದಗಳೆಲ್ಲ ಪ್ರಣವ (ಓಂಕಾರ) ದಲ್ಲಿ ಮುಳುಗಿ ಹೋಗುವವು. (ಲಯಹೊಂದುವವು) ಎಲ್ಲವೂ ಲಯವಾದ

ಒಳಿಕ, ಕೇವಲ ಶುದ್ಧವಾದ ನಾನೇ (ಪರಮಾತ್ಮನೇ) ಒಬ್ಬನೇ ಒಬ್ಬನು ಉಳಿಯುವೆನು. ಆತ್ಮಸ್ಥಿತಿಯಲ್ಲಿ ಮತ್ತೇನಾಗುವದೆಂಬದನ್ನು ಕೇಳು. ಭ್ರಮ ಸಹಿತವಾಗಿ ಭ್ರಾಂತಿಯು ಓಡಿಹೋಗುವದು. ಕರ್ಮಗಳ ಸಹಿತವಾಗಿ ಕರ್ಮ ಮಾರ್ಗವು (ಪ್ರವೃತ್ತಿಯು) ಪಲಾಯನಮಾಡಿ ಹೋಗುವದು. ನಿವೃತ್ತಿ ಮಾರ್ಗವೂ ಸಹ ನಾಚಿಕೊಂಡು ಕರಗಿ ಹೋಗಿ ಆತ್ಮಸ್ವರೂಪದಲ್ಲಿ ಕೂಡುವದು. ವೃತ್ತಿಯು ಸ್ವಸ್ವರೂಪದಲ್ಲಿ (ಆತ್ಮನಲ್ಲಿ) ಲಯಹೊಂದುವದು.

ಸೂರ್ಯೋದಯವು ಆದಕೂಡಲೆ, ಸೂರ್ಯನ ಕಾಂತಿಯು ಅಂಧಕಾರವನ್ನು ಸಮೂಲವಾಗಿ ನುಂಗಿಬಿಡುವದು. ಹೊನ್ನೆಹುಳಗಳ ಪ್ರಕಾಶವು ಲೋಪವಾಗಿ ಅವುಗಳ ಗುಂಪೇ ನಾಶವಾಗುವದು; ಆ ಸೂರ್ಯಪ್ರಕಾಶವು ಕೋಟಿಗಟ್ಟಲೆ ನಕ್ಷತ್ರಗಳನ್ನು ತಾತ್ಕಾಲದಲ್ಲಿಯೇ ನುಂಗಿಬಿಡುವದು. ಇದರಂತೆಯೇ ಪುರುಷನಿಗೆ ಸ್ವಸ್ವರೂಪವು ಪ್ರಾಪ್ತಿಯಾಗಲು, ಮಾಯೆಯ ಸ್ಫೂರ್ತಿಯು ಅಸ್ತಂಗತವಾಗುವದು ಅವನು ನಾಚಿ ಪ್ರವೃತ್ತಿ ನಿವೃತ್ತಿ ಮಾರ್ಗಗಳನ್ನು ಮರೆತು ಬಿಡುವನು. ಅಥವಾ ಪ್ರವೃತ್ತಿ ನಿವೃತ್ತಿ ಮಾರ್ಗಗಳೇ ತಾವೇ ನಾಚಿಕೊಂಡು ಆತ್ಮನಲ್ಲಿ ಲಯಹೊಂದುವವು ಕೊನೆಗೆ ಆ ಪುರುಷನಿಗೆ ಸ್ವಾನಂದಪ್ರಾಪ್ತಿಯಾಗಿ ಅವನು ನಿತ್ಯ ತೃಪ್ತಿಯನ್ನು ಹೊಂದುವನು. ಹೀಗೆ ನನ್ನ (ಆತ್ಮ) ಸ್ವರೂಪದ ಮಾಧುರ್ಯವನ್ನು ಸವಿಯಲಿಕ್ಕೆ, ಸಾಧಕನಿಗೆ ಅಖಂಡವಾದ ಚಿಂತೆಯು ಹತ್ತಲು, ಆಗ ಅವನ (ಸಾಧಕನ) ಚಿತ್ತವು ವಿಷಯಗಳನ್ನು ಬಿಡುವದು. ಗಿಡಗಳ ಅಥವಾ ಬಳ್ಳಿಗಳ ದೇಟುಗಳ ತುದಿಯಲ್ಲಿ ಕಾಯಿಗಳು ಆಗಿ ಬೆಳೆಯುವವು ಆದರೆ ಆ ಕಾಯಿಗಳು ಪೂರಾ ಹಣ್ಣಾಗಿ ತಾವೇ ಪಕ್ವದಶೆಯನ್ನು ಹೊಂದಿದ ಕೂಡಲೆ ಆ ಹಣ್ಣುಗಳು ಆ ದೇಟುಗಳಿಂದ ತಾವೇ ಉದುರಿ ಕಳಚಿ ಬೀಳುವವು. ಆ ಹಣ್ಣುಗಳು ಒಮ್ಮೆ ಆ ದೇಟುಗಳಿಂದ ಬೇರೆಯಾದವೆಂದರೆ (ಕಳಚಿ ಕೆಳಗೆ ಬೀಳಲು) ಅವುಗಳನ್ನು ತಿರುಗಿ ಆ ದೇಟುಗಳಿಗೆ ಹಚ್ಚಲಿಕ್ಕೆ ಹೋದರೆ ಅವು ಅವುಗಳಿಗೆ ಹತ್ತಲಾರವು. ಮೊಸರನ್ನು ಕಡೆದು ಮಜ್ಜಿಗೆ ಮಾಡಿ, ಅದರೊಳಗಿಂದ ಬೆಣ್ಣೆಯನ್ನು ತೆಗೆಯುವದು ಲೋಕರೂಢಿಯಿರುವದಷ್ಟೇ. ಮಂಥನ ಮಾಡಿ ಬೆಣ್ಣೆಯನ್ನು ತೆಗೆದ ಬಳಿಕ, ಆ ಬೆಣ್ಣೆಯನ್ನು ಪುನಃ ಆ ಮಜ್ಜಿಗೆಯಲ್ಲಿ ಹಾಕಿದರೆ, ಅದು ಅದರಲ್ಲಿ ಕೂಡುವದಿಲ್ಲ ಆ ಬೆಣ್ಣೆಯು ಮಜ್ಜಿಗೆಯಿಂದ ಭಿನ್ನವಾಗಿ ಅಲಿಪ್ತವಾಗುವದು. ಮಜ್ಜಿಗೆಯ ಲೇಪವು ಬೆಣ್ಣೆಗೆ ಆಗಲಾರದು. ಇದರಂತೆ ಆತ್ಮಸ್ವರೂಪ ಹೊಂದಲು

ಚಿತ್ತವು ವಿಷಯುಗಳನ್ನು ಬಿಟ್ಟು ಅಲಿಪ್ತವಾಗುವದು. ಪುರುಷನಿಗೆ ನನ್ನ (ಆತ್ಮ) ಸ್ವರೂಪತೆಯು ಪ್ರಾಪ್ತವಾದಾಗ, ದೈವಬಲದಿಂದ ಅವನಿಗೆ ವಿಷಯುಗಳು ಬಂದು ಗಂಟುಬಿದ್ದರೂ, ಅವನ ಚಿತ್ತದಲ್ಲಿ ವಿಷಯುಗಳ ಬಗ್ಗೆ ಅಪೇಕ್ಷೆಯು ಹುಟ್ಟಲಾರದು. ಯಾಕಂದರೆ ಅದಕ್ಕೆ ಸ್ವಸ್ವರೂಪತ್ವವು ಬಂದಿರುವದರಿಂದ ಅದು ಸಹಜವಾಗಿಯೇ ಅಲಿಪ್ತವಾಗಿರುವದು. ಹೀಗೆ ನನ್ನ (ಆತ್ಮಸ್ವರೂಪ ಸ್ಥಿತಿಯು) ಯೋಗವನ್ನು ಸಾಧಕನು ಸಾಧಿಸಲು, ಚಿತ್ತ ಹಾಗು ವಿಷಯುಗಳ ಪರಸ್ಪರ ವಿಯೋಗವು ಸಂಭವಿಸುವದು. ಅಂದರೆ ಚಿತ್ತವು ವಿಷಯುಗಳನ್ನು ಬಿಡುವದು. ವಿಷಯುಗಳು ಚಿತ್ತವನ್ನು ಬಿಡುವವು. ಇದು ಸಹಜವಾಗಿಯೇ ಸಂಭವಿಸುವದು. ಇದೇ ಸುಗಮವಾದ ಉಪಾಯವನ್ನು ನಾನು ಹೇಳಿರುವೆನು. ಋಷಿಗಳೇ, ಇಲ್ಲಿ ನೀವು ಪುನಃ ಸಂದೇಹವನ್ನು ಮನಸ್ಸಿನಲ್ಲಿ ತರಬೇಡಿರಿ. "ಆತ್ಮ ಸ್ವರೂಪವು ಶುದ್ಧವಾಗಿದ್ದು, ಅದು ಒಂದೇ ಒಂದು ಇರುವದು. ಹೀಗಿರಲು ಅದರಲ್ಲಿ ಬಾಧ್ಯ ಹಾಗು ಬಾಧಕಗಳೆಲ್ಲಿ? ಅಲ್ಲಿ ಸಾಧಕನು ಏನು ಸಾಧಿಸಬೇಕು?" ಎಂಬ ಶಂಕೆಯು ನಿಮ್ಮಲ್ಲಿ ಹುಟ್ಟಬಹುದು. ಇಂಥ ಸಂಧಿಯಲ್ಲಿಯಾದರೂ ಅಹಂತೆಯು ಬಂಧನಕ್ಕೆ ಕಾರಣವೆಂದು ತಿಳಿಯಿರಿ. ಅದರ ಲಕ್ಷಣವನ್ನು ನಾನು ಹೇಳುವೆನು. ಏಕಾಗ್ರಚಿತ್ತದಿಂದ ಕೇಳಿರಿ.

## ಅಹಂಕಾರದ ಮೂಲಕ ದೇಹಾಭಿಮಾನದ ಪ್ರಬಲತೆ.

ಅಭಿಮಾನದ ಕೌತುಕವು ಅಸಾಧ್ಯವಾಗಿದೆ. ಅದರಿಂದ ಯಾವ ಕಷ್ಟಗಳು ಸಂಭವಿಸುವವೆಂಬದು ನಮಗೆ ಪ್ರತ್ಯಕ್ಷವಾಗಿ ಕಾಣುವದು. ಅಭಿಮಾನದಿಂದ ಬರುವ ಸಂಕಟಗಳನ್ನು ಎಷ್ಟೆಂದು ಹೇಳೋಣ. ಒಂದು ಸ್ಥಾನದಲ್ಲಿ ಒಂದೇ ಮುಹೂರ್ತ ಪರಿಯಂತರ ನಾವು ವಸತಿಯನ್ನು ಮಾಡಲು, ಆ ಸ್ಥಾನದಲ್ಲಿ ನಮ್ಮ ಅಭಿಮಾನವು ಬೆಳೆಯುವದು. ಬುದ್ಧಿಯಲ್ಲಿ ಅಲ್ಪಮಾತ್ರವಾದರೂ ಅಹಂಕಾರವು ಉದಯವಾಗಲು, ಅದು ಶುದ್ಧ ವಸ್ತುಗಳನ್ನು ಚಿತ್ರವಿಚಿತ್ರವಾಗಿ ಮಾಡಿ, ಅವುಗಳಲ್ಲಿ ವಿಕಾರಗಳನ್ನು ಹುಟ್ಟಿಸುವದು; ಶುದ್ಧ ಪುರುಷರನ್ನು ಸಹ ಮಾಯಿಕರನ್ನಾಗಿ ಮಾಡುವದು. ಹೀಗೆ ದೇಹದಲ್ಲಿ ಅದು (ಅಹಂಕಾರವು) ಹೊಕ್ಕು ಪ್ರಬಲವಾಗಲು, ದೇಹಬುದ್ಧಿಯು (ದೇಹಾಭಿಮಾನವು ಬೆಳೆಯುತ್ತ ಹೋಗಿ ತತ್ಕಾಲದಲ್ಲಿ ಶುದ್ಧ ವಸ್ತುಗಳನ್ನು ಪುರುಷರನ್ನು ವಿಪರೀತ ಸ್ಥಿತಿಯಲ್ಲಿ ಒಯ್ದು ಹಾಕುವದು. ಒಮ್ಮೆ ದೇಹದಲ್ಲಿಯಾಗಲಿ ಬುದ್ಧಿಯಲ್ಲಿಯಾಗಲಿ ಹುಟ್ಟಿ

ತೆಂದರೆ, ಪುರುಷನಲ್ಲಿರುವ ಸ್ವಾಭಾವಿಕ ಆನಂದದ ಆಚ್ಛಾದನವಾಗುವದು; ಪರಮಾತ್ಮಸ್ಫೂರ್ತಿಯು ಸ್ಫುರಣವು ಮುಳುಗಿ ಹೋಗುವದು; ದೇಹದ ಮಮತ್ವವು ಪ್ರಬಲವಾಗಿ ಬೆಳೆಯುವದು. ಹೆಣ್ಣು ಆಮೆಗೆ ಇತರ ಪ್ರಾಣಿಗಳಂತೆ ಮೊಲೆ ಹಾಲು ಇರುವದಿಲ್ಲ - ಅದು ತನ್ನ ಮರಿಗಳನ್ನು ಕೇವಲ ಪ್ರೇಮಯುಕ್ತ ದೃಷ್ಟಿಯಿಂದಲೇ ಪೋಷಿಸುವದು. ಆಮೆಯ ಮರಿಗಳಿಗೆ, ಅವುಗಳ ತಾಯಿಯ (ಹೆಣ್ಣು ಆಮೆಯು) ಪ್ರೇಮಪೂರ್ಣದೃಷ್ಟಿಯಿಂದ:—ಅದರ ನೇತ್ರದೊಳಗಿನ ಪೋಷಕ ರಸದಿಂದ (ಅಮೃತದಿಂದ) ತೃಪ್ತಿಯಾಗುವದು. ಆದರೆ ಅವು ತಾಯಿಯನ್ನು ದೂರ ಬಿಟ್ಟು ತಪ್ಪಿಸಿಕೊಳ್ಳಲು ಹಸಿವೆಯಿಂದ ಕಂಗಾಲವಾದ ಆ ಮರಿಗಳಿಗೆ ಹೆಣ್ಣಾಮೆಯ ಚಕ್ಷುರಾಮೃತವು ಸಿಗದೆ, ಇದ್ದರೆ ಅವು ಮಣ್ಣನ್ನು, ರಾಡಿಯಾದ ಕೆಸರನ್ನು ಸೇವಿಸುವವು. ಇದರಂತೆ ಪುರುಷನಲ್ಲಿ ಸ್ವಾನಂದದ ಅಭಿವ್ಯಕ್ತಿಯು ಕುಂಠಿತವಾಗಲು, ಜೀವಕ್ಕೆ ವಿಷಯಾಸಕ್ತಿಯು ಅಂಟಿಕೊಂಡು ಅದು ಬೆಳೆಯುವದು. ಅದು (ಜೀವವು) ಸ್ತ್ರೀವಿಷಯಕ ವಾಸನೆಯ ಅಧೀನವಾಗುವದು. ಅದಕ್ಕೆ ಯಾವಾಗಲೂ ಮನಸ್ಸಿನಲ್ಲಿ ವಿಷಯಗಳ ಚಿಂತೆಯೇ; ಅದು (ಜೀವವು) ತಾನೇ ಪೂರ್ಣ ಬ್ರಹ್ಮನೆಂಬ ಗುರುತನ್ನು ಮರೆಯುವದು; ಅದು ಧನದ ವಿಷಯವಾಗಿ ಅತ್ಯಂತ ಹೀನವೂ, ದೀನವೂ ಆಗುವದು; ನಾನು ದೇಹವಂತನು, (ನಾನು ಮೂರುವರೆ ಮೊಳ ದೇಹದಲ್ಲಿ ಮಾತ್ರ ಇರುವವನು. ಅದಕ್ಕೂ ಹೆಚ್ಚಿನ ವ್ಯಾಪಕತೆಯು ನನಗೆ ಇರುವದಿಲ್ಲ) ವಿಸ್ತೃತ ಸಂಕುಚಿತ ಭಾವನೆಯು ಹುಟ್ಟಿ, ಅದರ ವ್ಯಾಪಕತ್ವದ ಸೀಮೆಯು ಮರ್ಯಾದಿತವಾಗುವದು. ಅಂದರೆ ನಾನು ಸಾಕ್ಷಾತ್ ವ್ಯಾಪಕವಾದ ಆತ್ಮವಸ್ತುವು ಎಂಬ ಭಾವನೆಯು ಹೋಗಿ ಅದರಲ್ಲಿ (ಜೀವದಲ್ಲಿ) ನಾನು ಮೂರುವರೆ ಮೊಳದಲ್ಲಿ ಮಾತ್ರ ವಾಸಮಾಡುವವನೆಂಬ ಸಂಕುಚಿತ ಬುದ್ಧಿಯು ಹುಟ್ಟುವದು. ಹೀಗೆ ಅದರಲ್ಲಿ ದೇಹಾಭಿಮಾನವು ದೃಢವಾಗಿ ನೆಲೆಗೊಳ್ಳುವದು. ಈ ದೇಹಾಭಿಮಾನದಿಂದ ಜೀವಕ್ಕೆ ಕರ್ಮಾಕರ್ಮಗಳ ಪ್ರಹಾರಗಳೂ, ಆಘಾತಗಳೂ ಒಡೆದು ಅದು ನಾನಾ ನರಕಯಾತನೆಗಳಲ್ಲಿ ಬೀಳುವದು; ಜನ್ಮ-ಮರಣಗಳಿಂದ ಕೂಡಿದ ಆವರ್ತ (ತಿರುಗಣಿ ಮಡುವಿನಲ್ಲಿ) ದಲ್ಲಿ ಅದು ಸಿಕ್ಕು, ಅತ್ಯಂತ ದುಃಖವನ್ನನುಭವಿಸಿ, ಕಷ್ಟಬಡುವದು.

## ಆತ್ಮಸ್ವರೂಪ ಭಾವನೆಯಿಂದಲೂ, ಭಗವದ್ಭಕ್ತಿಯಿಂದಲೂ ತುರ್ಯೆಯಲ್ಲಿ ಚಿತ್ತದ ಪ್ರವೇಶವೂ, ದೇಹಾಭಿಮಾನದ ನಿರ್ಮೂಲನವೂ ಜೀವದ ತದ್ರೂಪತೆಯೂ.

ಹೀಗೆ ಜೀವವು ದುಃಖಯಾತನೆಗಳನ್ನು ಭೋಗಿಸುವಾಗ, ಯಾವಸ

ಮನಸ್ಸಿನಲ್ಲಿ ತ್ರಾಸವುಂಟಾಗುವದೋ, ಸಂಸಾರ ವೇದನೆಯನ್ನು ಯಾವನು ಸಹಿಸಲಾರನೋ, ಅವನು ದೇಹಾಭಿಮಾನವನ್ನು ಬಿಟ್ಟುಬಿಡಬೇಕು. ದೇಹಾಭಿಮಾನವನ್ನು ತ್ಯಜಿಸಬೇಕೆಂದರೆ, ಅದು ಅವನನ್ನು ತತ್ಕಾಲದಲ್ಲಿಯೇ ಬಿಟ್ಟು ಹೋಗುವದಿಲ್ಲ; ಮತ್ತು ಅವನಾದರೂ ಅದನ್ನು ಬಿಡಲಾರನು. ಹೀಗೆ ಇಂಥ ದುರ್ಘಟ ಪ್ರಸಂಗವು ಒದಗಲು, ಮುಂದೆ ಸಾಧಕನು ಯಾವ ಹಾದಿಯನ್ನು ಸ್ವೀಕರಿಸಬೇಕೆಂಬದನ್ನು ಹೇಳುವೆನು ಕೇಳು. ಸಾಧಕನು ಸಾಧನಗಳಲ್ಲಿ ಬರುವ ಸಂಕಟಗಳನ್ನೂ, ಪ್ರತಿಕೂಲತೆಗಳನ್ನೂ ಸಹಿಸಬೇಕಾಗುವದು. ಸಾಧಕನು ಯಾವ ಯಾವ ಸಾಧನಗಳನ್ನು ಸಾಧಿಸುತ್ತ ಹೋಗುವನೋ, ಆಯಾ ಸಾಧನಗಳಲ್ಲಿ ಅವನಿಗೆ ಸಾಧನಾಭಿಮಾನವು ಹುಟ್ಟುವದು. ಅವನು ಕೂಡಲೆ ಆ ಸಾಧನಾಭಿಮಾನದಲ್ಲಿ ಸೇರುವನು. ಈ ಸಾಧನಾಭಿಮಾನವು ಅವನ ಸಹಾಯಕ್ಕೋಸ್ಕರ ಬಂದಂತೆ ಕಾಣುವದು; ಆದರೆ ಅದು ಅವನನ್ನು ಪೂರಾ ಸುಲಿದು ಬಿಟ್ಟು ಅವನಲ್ಲಿ ಇದ್ದಬಿದ್ದ ಗಂಟನ್ನು ಅಪಹರಿಸುವದು. ಇದರಿಂದ ಆ ಸಾಧಕನ ಸಾಧನದಲ್ಲಿ ವಿಘ್ನವುಂಟಾಗುವದು. ಆದ್ದರಿಂದ ಸಾಧಕನು ಯಾವ ಯಾವ ಸಾಧನಗಳನ್ನು ಅಂಗೀಕರಿಸಬೇಕೆಂಬದನ್ನು ಕೇಳು. ಸಾಧಕನು ವೇದೋಕ್ತ ಸ್ವಧರ್ಮಾಚರಣವನ್ನು ಆಚರಿಸಬೇಕು. ತನ್ನಲ್ಲಿ ಪೂರ್ಣ ವೈರಾಗ್ಯವು ನೆಲೆಗೊಳ್ಳುವಂತೆ ವಿಷಯ ವೈರಾಗ್ಯದ ಸಾಧನೆಯನ್ನು ಮಾಡಬೇಕು. ನನ್ನ (ಭಗವಂತನ) ಭಜನವನ್ನು ಅತ್ಯಂತ ಪ್ರೀತಿಯಿಂದ ಮಾಡಬೇಕು. ದೇಹಾಭಿಮಾನವು ತತ್ಕಾಲದಲ್ಲಿಯೇ ಹೋಗಬೇಕೆಂಬ ಇಚ್ಛೆಯು ಸಾಧಕನಲ್ಲಿದ್ದರೆ ಅವನು ಭಗವಂತನ ಚರಿತ್ರ, ಗುಣ, ನಾಮಕೀರ್ತಿಪರವಾದ ಗೀತಗಳನ್ನು ಪ್ರೇಮದಿಂದ ಹಾಡುತ್ತಿರಬೇಕು. ಗಾಯನದ ಆನಂದದಿಂದ ಕುಣಿಯುತ್ತ ಇರಬೇಕು. ಹರಿಕೀರ್ತನವನ್ನು ಮಾಡುತ್ತಿರಬೇಕು. ಸರ್ವ ಪ್ರಾಣಿಗಳನ್ನು ಸಮಾನದೃಷ್ಟಿಯಿಂದಲೂ, ಭಗವದ್‌ಭಾವನೆಯಿಂದಲೂ ನೋಡಬೇಕು. ಸರ್ವ ಪ್ರಾಣಿಗಳೂ ಭಗವಂತನ ಸ್ವರೂಪವೇ ಎಂದು ತಿಳಿಯಬೇಕು. ಸಾಧಕನು ಭಗವದ್‌ಭಾವನೆಯಿಂದ ಸಮಸ್ತ ಪ್ರಾಣಿಗಳನ್ನು ಸದಾಕಾಲವೂ ನೋಡುತ್ತ ಹೋದರೆ ತುರೀಯನೂ, ಸರ್ವಗತನೂ (ಸರ್ವ ವ್ಯಾಪಕನೂ) ಆದ ನನ್ನಲ್ಲಿ ಆ ಸಾಧಕನ ಚಿತ್ತವು ಪ್ರವೇಶಿಸುವದು. ನಾನು (ಪರಮಾತ್ಮನು) ಜಾಗೃತ್, ಸ್ವಪ್ನ, ಸುಷುಪ್ತಿ ಈ ಮೂರೂ ಅವಸ್ಥೆಗಳಲ್ಲಿ ಸತತವಾಗಿ ಇದ್ದು, ಆ ಮೂರೂ ಅವಸ್ಥೆಗಳನ್ನು ಪ್ರಕಾಶಿತವಾಗಿ ಮಾಡುವೆನು. ನಾನು (ಭಗವಂತನು) ಮೂರೂ

ಅವಸ್ಥೆಗಳಿಗೂ ಅತೀತನಾಗಿರುವೆನು. ಈ ಪ್ರಕಾರ ನಾನು (ಆತ್ಮನು) ಇರುವ ದರಿಂದಲೇ ನನಗೆ ತುರೀಯನೆಂದೆನ್ನುವರು.

ನಾನು (ಆತ್ಮನು) ತ್ರಿಗುಣಾತೀತನಾಗಿದ್ದು, ನಾನು ಒಬ್ಬನೇ ಒಬ್ಬನಿರು ವೆನು. ಎರಡನೆಯ ವಸ್ತುವೇ ಇರುವದಿಲ್ಲ. ನಾನು ಮೂರೂ ಗುಣಗಳ ಆಚೆಗೆ ಇರುವದರಿಂದಲೂ, ಮೂರು ಗುಣಗಳ ಆಚೆಗೆ ನಾಲ್ಕನೆಯದೊಂದು ಯಾವದೂ ಇರುವದಿಲ್ಲಾದ್ದರಿಂದಲೂ, ಮೂರು ಗುಣಗಳಿಗೆ ಮೀರಿದವನು ನಾನೊಬ್ಬನೇ ಒಬ್ಬನಿರುವದರಿಂದಲೂ, ಎರಡನೆಯ ವಸ್ತುವು ಇರುವದಿಲ್ಲಾದ್ದರಿಂದಲೂ ನನಗೆ 'ಏಕಮೇವಾದ್ವಿತೀಯಂಬ್ರಹ್ಮ' ಎಂದೆನ್ನುವರು; ಹಾಗು ನಾನು ತುರೀಯನಾಗಿ ರುವೆನು. ಬ್ರಹ್ಮೈಕ್ಯಸ್ಥಿತಿಯೇ ತುರೀಯಾವಸ್ಥೆಯು. ಅಲ್ಲಿ ಪರಬ್ರಹ್ಮನ ಹೊರ್ತು ಯಾವದೂ ಇರಲಾರದು. ಹೀಗೆ ನನ್ನ ಸ್ವರೂಪವು ಏಕಮೇವಾದ್ವಿತೀಯ' ವಾಗಿರುವದು. ಇಂಥ ತುರೀಯನೂ, ಗುಣಾತೀತನೂ ಆದ ನನ್ನಲ್ಲಿ (ಆತ್ಮನಲ್ಲಿ) ಯಾವ ಸಾಧಕನು ತನ್ನ ಚಿತ್ತವನ್ನು ಇಡುವನೋ ಅವನು (ಜೀವವು) ಆತ್ಮ ಸ್ವರೂಪತೆಯನ್ನೇ ಹೊಂದುವನು. ಆಗ ಅವನ ಸಂಸಾರಿಕ ಚಿಂತೆಯು ಲಯ ಹೊಂದಿ, ವಿಷಯಾವಸ್ಥೆಯು ಮುಣುಗಿ ಹೋಗುವದು; ಮತ್ತು ಚಿಂತೆ, ಚಿಂತನ, ವಿಷಯವಾಸನೆ, ಅಭಿಮಾನ ಇವೆಲ್ಲವುಗಳು ಶೂನ್ಯವಾಗುವವು. (ನಾಶ ಹೊಂದುವವು.) ಸ್ವಾನಂದಘನನಾದ ನಾನೊ (ಆತ್ಮನೊ) ಬ್ಬನೇ ಎಲ್ಲಿಯಾದರೂ ಪ್ರಕಟನಾಗುವೆನು. ದ್ವೈತದ ಭೇದಭಾವವು ಯಾವನಲ್ಲಿ ನಾಶವಾಗಿ ಹೋಗಿ ರುವದಿಲ್ಲವೋ ಹೀಗಿದ್ದರೂ ಯಾವನು ತಾನೇ ಸಜ್ಞಾನ (ಜ್ಞಾನಿ ಎಂದು) ನೆಂದು ಅಂದುಕೊಳ್ಳುವನೋ, ಅವನು ಸುಮ್ಮನೆ ವೃಥಾ ಜ್ಞಾನಾಭಿಮಾನವನ್ನು ಅಂಗೀ ಕರಿಸಿದವನೆಂದು ತಿಳಿದುಕೊಳ್ಳಬೇಕು. ಹೀಗೆ ಜ್ಞಾನಿಯೆಂದು ಜ್ಞಾನಾಭಿಮಾನ ವನ್ನು ತಾಳುವದೊಂದು ಅಜ್ಞಾನವೇ ಸರಿ.

## ಜ್ಞಾನಾಭಿಮಾನ, ಶಾಸ್ತ್ರಾಭಿಮಾನ, ಕರ್ಮಾಭಿಮಾನ, ಇತ್ಯಾದಿ ಭೇದಭಾವನೆಯಿಂದ ನಿಜಜ್ಞಾನದ ಅಪ್ರತ್ಯಯತೆ.

ಜಗತ್ತಿನಲ್ಲಿ ನಾನಾವರ್ಣಗಳು, ನಾನಾವ್ಯಕ್ತಿಗಳು, ನಾನಾಗೋತ್ರಗಳು, ನಾನಾಜಾತಿಗಳು, ಅಧಮೋತ್ತಮ ವಿಧಿವಿಧಾನಗಳು, ಅಧಮೋತ್ತಮ ಸ್ಥಿತಿಗಳು ಹೀಗೆ ದ್ವೈತ ಭೇದಗಳಿರುವವು. ಇವೆಲ್ಲ ಭೇದಗಳು ಚಿತ್ತಕ್ಕೆ ದೃಢವಾಗಿಯೂ, ನಿಜವಾಗಿಯೂ ತೋರುವವು. ನಾನು ಕಪ್ಪುವರ್ಣದವನು, ಅಥವಾ ಕೆಂಪುವರ್ಣ

ದವನು, ಅಥವಾ ನಾನು ಶ್ಯಾಮವರ್ಣದವನು; ನಾನೇ ಶ್ರೇಷ್ಠವಾದ ಜ್ಞಾನಿಯು ನನ್ನ ಲೀಲೆಗಳು ಅಗಾಧವಾಗಿಯೂ, ಪವಿತ್ರವಾಗಿಯೂ, ಉತ್ತಮವಾಗಿಯೂ ಇರುವವು; ನಾನು ಸತ್‌ಕುಲೀನನು; ನನ್ನ ಕುಲವೇ ಎಲ್ಲಕ್ಕೂ ಹೆಚ್ಚಿನದು. ಈ ಪ್ರಕಾರ ಸಾಧಕನಿಗೆ ಭೇದಪ್ರಾಪ್ತಿ (ದ್ವೈತಭಾನವು) ಯು ಆಗುವದು. ಇಂಥ ದ್ವೈತದ ಸೋಂಕುಬಡಿದ ಸಾಧಕನು ಏಕತ್ವ (ಅದ್ವೈತ) ಪ್ರತಿಕಾರಕ ಶ್ರುತಿಗಳನ್ನು ಎಷ್ಟು ಓದಿದರೂ, ನೋಡಿದರೂ ಕೂಡ, ಅವನಿಗೆ ಶಾಸ್ತ್ರಾರ್ಥ ಯುಕ್ತಿಗಳಿಂದ ಅವನ ಭೇದ (ದ್ವೈತ) ನಿವೃತ್ತಿಯು ಆಗುವದೇ ಇಲ್ಲ. ಇಂಥ ಭೇದ ನಿವೃತ್ತಿಯಾಗದ ಸಾಧಕನ ಜ್ಞಾನಾಭಿಮಾನ (ನಾನು ತಿಳಿದವನೆಂಬ ಅಭಿಮಾನ) ವೂ ವ್ಯರ್ಥವು; ಅವನ ಕರ್ಮಾಚರಣೆಯೂ ವ್ಯರ್ಥವು. ಅವನು ಎಚ್ಚರಿಕೆಯಿಂದ ಇರುವನೆಂದು ಲೋಕಕ್ಕೆ ಕಂಡರೂ, ಅವನು ವಸ್ತುತಃ ಗಾಢನಿದ್ರೆಯಲ್ಲಿರುವನು; ಅವನಿಗೆ (ಇಂಥ ಭೇದಪರಸಾಧಕನಿಗೆ) ಜಾಗ್ರತಿ (ಎಚ್ಚರಿಕೆ)ಯು ಹ್ಯಾಗೆ ಬರಬೇಕು? ಯಾಕಂದರೆ ಅವನಲ್ಲಿ ದೇಹಾಭಿಮಾನವು ಅಧಿಕವಾಗಿದ್ದು, ಅವನ ಸ್ಥಿತಿಯು ಮದ್ದುಗುಣಿಕೆಯ ಬೀಜಗಳ ಸೇವನ ಮಾಡಿದವನಂತೆ ಉನ್ಮತ್ತನಾಗಿ ಅವನಿಗೆ ಹುಚ್ಚು ಹಿಡಿಯುವದು; ಬರಬರುತ್ತ ಅವನು ಅತ್ಯಂತ ಭ್ರಮಿಷ್ಠನಾಗುವನು. ಅವನಲ್ಲಿ ಆ ವಿದ್ಯೆಯು ಹೆಚ್ಚಾಗಿ ಬೆಳೆಯುವದು. ಆಗ ಅವನಿಗೆ ದೀರ್ಘ ಸ್ವಪ್ನಗಳು ಬೀಳುವವು; ಅವನಿಗೆ ನಾ ನಾ ಭೇದಗಳು ತೋರುವವು.

ಇಂಥ ದ್ವೈತದಲ್ಲಿ ಸಿಕ್ಕು ದೇಹಾಭಿಮಾನದಿಂದ ಉನ್ಮತ್ತನಾದ ಸಾಧಕನು ಬಾಯಿಂದ ಹುಚ್ಚು ಹಿಡಿದಂತೆ ಎಷ್ಟು ಬಡಬಡಿಸಿದರೂ, ಅವನಿಗೆ ಯಾವ ಅರ್ಥವೂ ಲಭಿಸುವದಿಲ್ಲ; ಅದರಂತೆ ಶ್ರುತಿ ಶಾಸ್ತ್ರಗಳ ಕೇವಲ ಪಠನಮಾತ್ರದಿಂದ ದೇಹಾಭಿಮಾನವುಳ್ಳ ಸಾಧಕನಿಗೆ ಪರಮಾರ್ಥಪ್ರಾಪ್ತಿಯು ಸಾಧಿಸುವದಿಲ್ಲ; ಶ್ರುತಿ-ಶಾಸ್ತ್ರಗಳ ನಿಜವಾದ ಅರ್ಥವೂ ತಿಳಿಯುವದಿಲ್ಲ. ಇಂಥ ಸಾಧಕರು ನಿತ್ಯದಲ್ಲಿಯೂ ವೇದಾಧ್ಯಯನವನ್ನು ಮಾಡಿದರೂ, ಅರ., ಬ್ರಾಹ್ಮಣ, ಸೂತ್ರ ನಿರುಕ್ತಿಗಳನ್ನು ಪಠಣ ಮಾಡಿದರೂ, ಅವರಿಗೆ ಕಾಮ-ಕ್ರೋಧ ನಿವೃತ್ತಿಯಾಗುವದಿಲ್ಲ. (ಅವರ ಕಾಮ-ಕ್ರೋಧಾದಿಗಳು ಎಂದಿಗೂ ಹೋಗಲಾರವು) ಕೇವಲ ವೇದ-ಶಾಸ್ತ್ರಗಳ ಪಠಣದಿಂದ, ಪರಮಾರ್ಥವಾಗಲಿ ಮೋಕ್ಷವಾಗಲಿ ಪ್ರಾಪ್ತವಾಗಲಾರದು ಯಾಕಂದರೆ ಇಂಥ ದೇಹಾಭಿಮಾನವುಳ್ಳ ಸಾಧಕನಲ್ಲಿ, ದೇಹಾಭಿಮಾನದಿಂದ ಭೇದದೃಷ್ಟಿಯು ಇದ್ದೇ ಇರುವದು; ಇವನು ಕೋಟಿಗಟ್ಟಲೆ ಶ್ರುತಿ-ಶಾಸ್ತ್ರಗ್ರಂಥಗಳನ್ನು ಪಠಣ ಮಾಡಿದಾಗ್ಯೂ, ಇವನ ದ್ವೈತದೃಷ್ಟಿಯು

ನಾಶವಾಗಿ ಹೋಗುವತನಕ, ಇವನಿಗೆ ಪರಮಾರ್ಥಪ್ರಾಪ್ತಿಯಾಗಲಿ ಅದರ ಗುರು ತಾಗಲಿ ಆಗಲಾರದು; ಒಬ್ಬನಿಗೆ ಸ್ವಪ್ನವು ಬೀಳುವದು; ಅವನು ಆ ಸ್ವಪ್ನ ದಲ್ಲಿಯೇ ಎಚ್ಚರವಾ(ದಂತೆ)ಗ ವನು; ಆಗ ಅವನು ಸ್ವಪ್ನದಲ್ಲಿಯೇ ವೇದ-ಶಾಸ್ತ್ರ ಗಳನ್ನು ಪಠಣ ಮಾಡುವನು. ಹೀಗೆ ಸ್ವಪ್ನದಲ್ಲಿಯೇ ವೇದ-ಶಾಸ್ತ್ರಗಳನ್ನು ಪಠಣ ಮಾಡುವವನು ಎಚ್ಚರವಾಗಿರುವನು, ಜಾಗ್ರತಾವಸ್ಥೆಯಲ್ಲಿ ಇರುವನು ಎಂದು ಯಾರಾದರೂ ಅಂದರೂ ಅದು ಸತ್ಯವಾದ ಮಾತು ಅಲ್ಲ ಅವನು ನಿದ್ರಾವಸ್ಥೆಯಲ್ಲಿಯೇ ಇರುವನೆಂಬದ ಸ್ಪಷ್ಟವಾಗಿ ತೋರುವದು ಹೀಗೆ ಶಾಸ್ತ್ರಜ್ಞಾನ ವ್ಯವಹಾರವಾಗಿರುವದು. ದೇಹಾಭಿಮಾನದಿಂದ ಸಾಧಕನಿಗೆ ಭೇದ(ದ್ವೈತ) ಭಾಸವಾಗಿರುವದು. ಈ ಅವನ ದೇಹಾಭಿಮಾನವು ಅವನಿಂದ ಎಲ್ಲಿಯು ವರೆಗೆ ನಿಃಶೇಷವಾಗಿ ಹೋಗಿರುವದಿಲ್ಲವೋ, ಅಲ್ಲಿಯು ವರೆಗೆ ಅವನಿಗೆ ನಿಜಜ್ಞಾನವು ಆಗುವದಿಲ್ಲ. ಆ ದ್ವೈತ (ಭೇದ)ವೇ ಅವನಿಗೆ ಅತ್ಯಂತ ಬಂಧನವು

## ಸನಕಾದಿಕ ಮುನಿಗಳ ಆಶಂಕೆ, ವೇದಗಳೇ ಭೇದದ ಪ್ರತಿಪಾದನವನ್ನು ಮಾಡಿರಲು, ವೇದಾಜ್ಞೆಯನ್ನು ಅಸತ್ಯವೆಂದು ಯಾಕೆ ತಿಳಿಯಬೇಕು?

ಸನಕಾದಿಕರ ಆಶಂಕೆಯನ್ನೇ ತಕ್ಕೊಂಡು ಹಂಸಸ್ವರೂಪಿಯಾದ ಭಗವಂತನೇ ವೇದವಿಭಾಗವನ್ನು ಸಕಲ ಲೋಕಕ್ಕೆ ತಿಳಿಯುವಂತೆ ಸರಳವಾಗಿ ಹೇಳುವನು. ಸನಕಾದಿಕರ ಆಶಂಕೆಯೇನಂದರೆ:—"ವೇದಗಳೇ ಭೇದವನ್ನು ಮಾಡಿರುತ್ತವೆ. ವೇದಗಳು ವರ್ಣಾಶ್ರಮ ಭೇದವನ್ನು ಮಾಡಿರುತ್ತವೆ ಮತ್ತು ವಿವಿಧ ಕ್ರಿಯಾಕರ್ಮಗಳನ್ನು ಮಾಡಲಿಕ್ಕೆ ಹೇಳುತ್ತವೆ ಹೀಗಿದ್ದು, ನೀನು (ಭಗವಂತನ )ಭೇದದೃಷ್ಟಿಯು ಹೋದ ಹೊರತು ಪರಮಾರ್ಥವೇ ಸಾಧಿಸುವದಿಲ್ಲೆಂದು ಹೇಳುವಿ; ಆದರೆ ಇವುಗಳಲ್ಲಿ ನಿಜವಾದದ್ದು ಯಾವದು? ನಿನ್ನ ವೇದಗಳು ತಾವೇ ಸಕಲ ಭೇದಗಳನ್ನು ಪ್ರಕಟ ಮಾಡಿ, ಗರ್ಜನೆ ಮಾಡುತ್ತ ಹೇಳುತ್ತಿರುವವು. ವೇದಗಳೇ ಭೇದಗಳನ್ನು ಪ್ರತಿಪಾದನ ಮಾಡಿರುತ್ತವೆ. ಆದ್ದರಿಂದ ವೇದಾನುವಾದವು ಮಿಥ್ಯವಲ್ಲ. ವೇದವಚನವು ತಾತ್ವಿಕ (ಸತ್ಯ) ವೆಂದು, ಅವಶ್ಯಕವಾಗಿ ತಿಳಿಯಬೇಕೆಂದು ನೀನೇ ಕಲಿಸಿರುವಿ. ಅಂದಬಳಿಕ ಆ ವೇದವೇ ಸುಳ್ಳೆಂದು ಹ್ಯಾಗೆ ಅನ್ನಬೇಕು? ವೇದಾಜ್ಞೆಯ ಪ್ರಕಾರ ಲೋಕದವರು ನಡೆಯತಕ್ಕ ನಿಯಮಗಳು ಬಹು ಶ್ರೇಷ್ಠವಾಗಿರುವವು. ವೇದಗಳು ತಾವು ಪ್ರತಿ

ಪಾದಿಸುವ ಕ್ರಿಯಾಕರ್ಮಗಳನ್ನು ಪುರುಷನು ಮಾಡಿಯೇ ತೀರಬೇಕೆಂದು ನಿಯಮಗಳನ್ನು ಹಾಕಿಕೊಟ್ಟಿರುವವು ವೇದಗಳ ಆಜ್ಞೆಯು ಬಲದಿಂದಲೇ ಲೋಕದಲ್ಲಿ ವರ್ಣಾಶ್ರಮಗಳು ನಡೆದಿರುತ್ತವೆ ವೇದಗಳ ಆಜ್ಞೆಯು ಪ್ರಕಾರ ಆಯಾ ವರ್ಣಾಶ್ರಮದವರು ತಮ್ಮ ತಮ್ಮ ಧರ್ಮಗಳನ್ನು ನಡಿಸಿ ಅವನ್ನು ಕಾಪಾಡುತ್ತಿರುವರು. ವೇದಗಳು ಸುಳ್ಳು ಎಂದು ಯಾರು ಅನ್ನುವರೋ ಅವರು ಕೇವಲ ಪಾಖಂಡಿಗಳು (ವೇದಬಾಹ್ಯರು) ಎಂದು ಅನ್ನಬೇಕೆಂದು ನೀನೇ ಹೇಳಿರುವಿ. ಹೀಗಿರಲು, ವೇದವು ಸುಳ್ಳು ಎಂದು ನಾವು ಹ್ಯಾಗೆ ತಿಳಿಯೋಣ ಹೀಗೆ ನಮ್ಮ ಶಂಕೆಯಿರುವದು.

## ಅವಿದ್ಯೆಯಲ್ಲಿ ಸಿಕ್ಕ ಜನರಿಗೆ ವೇದಗಳ ನಿಯಾಮಕತೆಯೂ, ಭಗವದ್ಭಕ್ತರಿಗೆ ಅವುಗಳ ಅನಿಯಾಮಕತೆಯೂ.

ಸನಕಾದಿಕರ ಮೇಲಿನ ಶಂಕೆಗೆ ಹಂಸರೂಪಿಯಾದ ಭಗವಂತನು ತಾನೇ ಯೋಗ್ಯವಾದ ಸ್ಪಷ್ಟ ಉತ್ತರವನ್ನು ಕೊಟ್ಟು, ಮೇಲಾದ ವಿವೇಕವನ್ನು ಹೇಳುವನು. ಯಾರಲ್ಲಿ ಅವಿದ್ಯೆಯಿಂದ ಭೇದದೃಷ್ಟಿಯು ಪ್ರಬಲವಾಗಿದೆಯೋ, ಅವರಿಗೆ ವೇದಗಳ ನಿಯಾಮಕತೆಯನ್ನಿಟ್ಟಿರುವೆನು; ಆದರೆ ನನ್ನಲ್ಲಿ (ಭಗವದ್ರೂಪದಲ್ಲಿ) ಅಭೇದತೆಯಿಂದ ಐಕ್ಯತೆಯನ್ನು ಹೊಂದಿದ ಭಕ್ತರಿಗೆ ವೇದಗಳ ನಿಯಾಮಕತೆಯಿಲ್ಲ. ಅಂಥ ಭಕ್ತರಿಗೆ ವೇದನಾದವು ಕೇವಲ ತಿರಸ್ಕರಣೀಯವಾಗಿಯೂ, ಅಮಂಗಲವಾಗಿಯೂ ಆಗಿರುವದು. ಭಗವದ್ಗೀತೆಯಲ್ಲಿ ಹೇಳಿದಂತೆ ವೇದಗಳು ತ್ರಿಗುಣಾತ್ಮಕವಾಗಿರುವವು. ಅಭೇದ (ದ್ವೈತ) ದೃಷ್ಟಿಯಿಂದ ಭಗವಂತನ ಭಜನೆಯಿಂದ ಭಕ್ತರು ಕೇವಲ ಗುಣಾತೀತರೂ, ನಿರ್ಗುಣರೂ ಆಗಿರುವರು. ತ್ರಿಗುಣಾತೀತರಾದ ಆ ಭಗವದ್ಭಕ್ತರ ಮುಂದೆ ನನ್ನ ಆಜ್ಞೆಯನ್ನು ಪಡಕೊಂಡ ವೇದಗಳ ನಿಯಾಮಕತೆಯೂ ನಡೆಯುವದಿಲ್ಲ. ರಾಜನ ಕೇವಲ ಜೀವಿತ ಸರ್ವಸ್ವವಾದ (ಜೀವಲಗ) ಸೇವಕನನ್ನು ದ್ವಾರಪಾಲಕರು ನಿಯಮನ ಮಾಡಲಾರರು. ರಾಜನ ತೊಡೆಯ ಮೇಲೆ ಕುಳಿತಿರುವ, ಅಥವಾ ರಾಜನ ತೊಡೆಯ ಸಂಪರ್ಕವಾದರೂ ಆದ ದಾಸಿಯನ್ನು ಪ್ರಧಾನ ಜನರು ಮನ್ನಿಸುವರು. ತಾಯಿಯು ತನ್ನ ಮಗಳಿಗೆ "ಗಂಡನ ಸಂಗಡ ಲೋಕದ ಜನರ ಎದುರಿಗೆ ಮಾತಾಡಬೇಡ. ಜನರು ಇರುವಾಗ ಗಂಡನಿಗೆ ನಾಚಿ ನಡೆ ಅವನೂ, ನೀನೂ ಏಕಾಂತದಲ್ಲಿ ಕೂಡಿದಾಗ ಮಾತ್ರ ನೀನು ನಾಚಿಕೆಯನ್ನು ಬಿಟ್ಟುಬಿಟ್ಟರೂ ನಡೆ

ದೀತು'' ಎಂದು ಕಲಿಸುವಳು. ಭೇದಭಾನವು (ಭೇದವು ನಿಜವೆಂಬ ತಿಳುವಳಿಕೆ ಯು) ಎಲ್ಲಿಯ ವರೆಗೆ ಇರುವದೋ ಅಲ್ಲಿಯ ತನಕ ವೇದವಚನದಂತೆ ನಡೆಯಲೇ ಬೇಕು; ಆದರೆ ಭೇದಭಾನವು ನಿರಸನವಾದ ಬಳಿಕ ವೇದಮರ್ಯಾದೆಯು ತನ್ನಿಂದ ತಾನೇ ಬಿಟ್ಟು ಹೋಗುವದು. ಅಭೇದಭಾವನೆ (ಅದ್ವೈತಭಾವನೆ) ಯಿಂದ ನಡೆ ಯುವ ನನ್ನ (ಭಗವಂತನ) ಭಕ್ತರಿಗೆ ವೇದವಿಧಾನಗಳು ಎಂದಿಗೂ ಬಾಧಿಸಲಾ ರವು; ಯಾಕಂದರೆ ನನ್ನ (ಭಗವಂತನ) ಸ್ವಸ್ವರೂಪದಲ್ಲಿ ಐಕ್ಯರಾಗಿರುವರು. ಆಶೆಯೆಂಬದೇ ಅವಿದ್ಯೆಯ ಬಾಧೆಯು. ಈ ಅವಿದ್ಯೆ (ಅಜ್ಞಾನ) ಯನ್ನು ಭೇದಿಸಿದ ಬಳಿಕ ಮೀರಲಾರದು, ಅವರನ್ನು ಬಾಧಿಸಲಾರದು. ಸೂರ್ಯೋದಯವಾಗಲು ಸೂರ್ಯನ ಕಾಂತಿಯ ಮುಂದೆ ಚಂದ್ರನ ನಿಜತೇಜವು ಮಂದವಾಗುವಂತೆ ಅವಿದ್ಯೆಯನ್ನು ಭೇದಿಸಿ ಭಗವದ್ರೂಪದಲ್ಲಿ ಐಕ್ಯರಾದ ನನ್ನ ಭಕ್ತರನ್ನು ಭೇದಗ ಳನ್ನು ಹೇಳುವ ವೇದವಾದವು ಎಂದಿಗೂ ಬಾಧಿಸಲಾರವು. ಗುರುಕೃಪೆಯಿಂದ ಜ್ಞಾನ ಪಡಕೊಂಡ ಸುಜ್ಞಾನ ಭಕ್ತರಿಗೆ ದೇಹದ ಅಭಾದಿತ ಭಾನವೂ, ಮಿಥ್ಯಾ ಪ್ರಪಂಚದ ದರ್ಶನವೂ. ಕರ್ಮಗಳೂ, ಕರ್ತೃತ್ವವೂ ಇರುವದಿಲ್ಲ. ವರ್ಣಾಶ್ರಮ ಭೇದದ ಮೂಲವು ಅವಿದ್ಯೆಯು ಇರುವದರಿಂದಲೇ ಅವುಗಳ ಭೇದಗಳು ಪ್ರಕಟವಾಗಿರುವವು.

ವೇದದೊಳಗಿನ ಅವಿದ್ಯಾಕೃತ ಕ್ರಿಯಾಕರ್ಮಗಳೂ, ವೇದೋಕ್ತಕ್ರಿಯಾ ಕರ್ಮಗಳೂ ಅಜ್ಞಾನಿಗೆ ಸತ್ಯವಾಗಿ ಭಾಸವಾಗುವವು. ಆದರೆ ಇದು ಅವನ ಕೇವಲ ಅಜ್ಞಾನಮೂಲಕವಾದ ಭ್ರಾಂತಿಯು. ಜ್ಞಾನಿಯಾದ ಭಗವದ್‌ಭಕ್ತನಲ್ಲಿ ಅವಿದ್ಯೆಯು ಸ್ವಲ್ಪಾದರೂ ಇರುವದಿಲ್ಲ. ಅವಿದ್ಯೆಯೇ ಇಲ್ಲದ ಬಳಿಕ ವೇದ ವಿಧಾನವಾದರೂ ಅವನಲ್ಲಿ ಸೇರಲಿಕ್ಕೆ ಯಾವ ಕಾರಣವಿರುವದು? ತೋಟದಲ್ಲಿ ಮಾವಿನ ಕಾಯಿಗಳು ಒಳ್ಳೇ ಸುಫಲಿತ (ಪರಿಪಕ್ವ)ವಾದಾಗ ಕಾಯಿಗಳು ಹಣ್ಣು ಆಗಿರುವವರೆಗೆ, ಅವುಗಳನ್ನು ಆಶೆಯಿಂದ ಅನ್ಯರು ಅಪಹರಿಸಬಾರದೆಂದು ಅವು ಗಳನ್ನು ಕಾಯಲಿಕ್ಕೆ ಕಾವಲುಗಾರರನ್ನು ಇಡಬೇಕಾಗುವದು. ಅವೇ ಹಣ್ಣು ಗಳು ತಾವೇ ನಮ್ಮ ಕೈಸೇರಿದ ಮೇಲೆ, ಅವುಗಳನ್ನು ಕಾಯಲಿಕ್ಕೆ ಸ್ವಲ್ಪಾದರೂ ಕಾವಲುಬೇಡ. ಅದರಂತೆ ಅವಿದ್ಯೆಯ ಬಂಧನವು ಇರುವ ತನಕ, ವೇದದ ವಿಧಾನಗಳ ಅವಶ್ಯಕತೆಯಿರುವದು. ಅವಿದ್ಯೆಯೇ ಯಾವಾಗ ನಾಶ ಹೊಂದು ವದೋ, ಆಗ ವೇದ ವಿಧಿವಿಧಾನಗಳೂ ತಾವೇ ಸ್ಥಾನವನ್ನು ಬಿಟ್ಟು ಹೋಗು ವವು. ಅವಿದ್ಯೆಯು ನಿರಸ್ತವಾದರೂ ದೇಹವನ್ನು ಧಾರಣಮಾಡಿರುವಾಗ್ಗೆ

ಆದರೂ ದೇಹಧಾರಣ ಮಾಡಿರುವಾಗ ಮಾಡತಕ್ಕ ಕ್ರಿಯಾಕರ್ಮಗಳನ್ನು ಮಾಡಲೇ ಬೇಕಾಗುವದು. ಆದರೆ ಅವಿದ್ಯೆಯು ಯಾರಲ್ಲಿ ನಾಶವಾಗಿದೆಯೋ, ಅಂಥ ದೇಹಧಾರಣ ಮಾಡಿದ ಜ್ಞಾನಿಗೆ ಆ ಕ್ರಿಯಾಕರ್ಮಗಳನ್ನು ಮಾಡುವ ಯಾವ ಹೇತುವೂ ಇರುವದಿಲ್ಲ. ಅವನು ಕೇವಲ ನಿಷ್ಕಾಮನಾಗಿರುವನು. ಆದರೆ ನಿರ್ಹೇತುಕವಾಗಿ ದೇಹಧಾರಣ ಮಾಡುವದು ಸಂಭವಿಸುವದಿಲ್ಲೆಂದು ನೀವು (ಶಂಕಾದಿಕರು)ಅಂದರೆ ನಿಮ್ಮ ಈ ಶಂಕೆಗೆ ಪರಿಹಾರವನ್ನು ಹೇಳುವೆನು ಕೇಳಿರಿ. ಸ್ವಪ್ನದಲ್ಲಿಯು ದೇಹಾದಿ ಪ್ರಪಂಚಭಾನವು ಸ್ವಪ್ನದಲ್ಲಿಯೇ ಸತ್ಯವಾಗಿರುವದು. ಆದರೆ ಎಚ್ಚರಿಕೆಯಾಗಲು, ಏನೂ ಕಾರಣವಿಲ್ಲದೆ ಕೇವಲ ಸಂಸ್ಕಾರದಿಂದ ಸ್ವಪ್ನವು ಕಾಣುವದು ಅಂದರೆ ಸ್ವಪ್ನದಲ್ಲಿ ನಡೆದ ಕಾರ್ಯಗಳು ಎದುರಿಗೆ ನಡೆಯುವಂತೆ ಜಾಗ್ರತಿಯಲ್ಲಿ ಕಾಣವವು ಒಬ್ಬ ಪುರುಷನಿಗೆ ಸ್ವಪ್ನದಲ್ಲಿ ರಾಜ್ಯಪದವು ಲಭಿಸುವದು, ಅಥವಾ ಒಬ್ಬನು ಸ್ವಪ್ನದಲ್ಲಿ ವ್ಯಾಘ್ರಮುಖದಲ್ಲಿ ಸಿಕ್ಕಿರುವನು. ಅಥವಾ ಮತ್ತೊಬ್ಬನಿಗೆ ಸ್ವಪ್ನದಲ್ಲಿ ಧನಾದಿಗಳ ಲಾಭವಾಗುವದು. ಅಥವಾ ಒಬ್ಬನಿಗೆ ಅತ್ಯಂತ ಬೆಲೆಯುಳ್ಳ ರತ್ನಗಳು ದೊರೆಯುವವು. ಆದರೆ ಸ್ವಪ್ನದೊಳಗಿನ ಸುಖ-ದುಃಖಗಳು ಜಾಗ್ರತಾವಸ್ಥೆಯಲ್ಲಿ ಎಚ್ಚರಿಕೆಯಿಂದ ಇದ್ದವನಿಗೆ ಹತ್ತುವದಿಲ್ಲ ಇದರಂತೆ ಜ್ಞಾನಿಗೆ ನಿಜಾತ್ಮ ಸ್ವರೂಪದ ಅರುವು ಇರುವದರಿಂದ ಅವನಿಗೆ ಅವಿದ್ಯೆಯ ಸಂಬಂಧವಾದ ಬಾಧೆಯು ಇರಲಾರದು. ದೇಹಧಾರಣ ಮಾಡಿದಾಗ್ಯೂ ವಿದೇಹ ಸ್ಥಿತಿಯನ್ನು ಹ್ಯಾಗೆ ಪಡೆಯಬೇಕೆಂಬದಕ್ಕೆ ಜ್ಞಾನದಾಯಕ ಯುಕ್ತಿಗಳನ್ನು ಹೇಳುವೆನು ಕೇಳಿರಿ. ಅದರಿಂದ ಭೇದದ ಉತ್ಪತ್ತಿಯೆಲ್ಲ ಭೇದಿಸಲ್ಪಡುವದು.

## ಮೂರೂ ಅವಸ್ಥೆಗಳಲ್ಲಿ ಆತ್ಮನ ಸಾಕ್ಷಿತ್ವವು.

ಮೂರೂ ಅವಸ್ಥೆಗಳಲ್ಲಿ (ಜಾಗ್ರತ್-ಸ್ವಪ್ನ-ಸುಷುಪ್ತಿಗಳಲ್ಲಿ) ದೇಹದಲ್ಲಿ ಒಬ್ಬನೇ ಆತ್ಮನಿರುವನು. ಇಂಥ ಸ್ಥಿತಿಯಲ್ಲಿರುವವನನ್ನೇ ದೇಹಧಾರಣ ಮಾಡಿದರೂ ವಿದೇಹಿಯೆಂದು ಕರೆಯಬೇಕು. ಇಂಥ ಜ್ಞಾನಿಯು ತಾನು ಆತ್ಮನಂತೆ ಸಾಕ್ಷಿಭೂತನಾಗಿ ಸರ್ವ ಕಾರ್ಯಗಳನ್ನೂ ಎಲ್ಲ ಅವಸ್ಥೆಗಳಲ್ಲಿ ನೋಡುವನು. "ನಾನೇ ಮೊದಲು ಬಾಲಕನಿದ್ದವನು ಈಗ ತರುಣನಾಗಿರುವೆನು. ಈ ತರುಣಾವಸ್ಥೆಯು ಹೋಗಿ, ಈಗ ನನಗೆ ಮುಪ್ಪು ಒಂದಿದೆ" ಹೀಗೆ ವಯಸ್ಸಿನಲ್ಲಿ ಆದ ಬೇರೆ ಬೇರೆ ಅವಸ್ಥೆಗಳ ಸಾಕ್ಷಿತ್ವವನ್ನು ವಿದೇಹಿಯಾದ ಜ್ಞಾನಿಯು ತಾನೇ

ನೋಡುವನು. ಪುರುಷನು (ಜೀವನು) ಜಾಗ್ರತಾವಸ್ಥೆಯಲ್ಲಿ ನಾನಾಭೋಗ ಗಳನ್ನು ಭೋಗಿಸುವನು. ಜಾಗ್ರತಿಗೇ ನಾನಾ ಭೋಗಗಳ ಉಪಭೋಗ ವುಂಟು. ಅವೇ ಭೋಗಗಳೇ ಸ್ವಪ್ನದಲ್ಲಿ ಪುರುಷನ ಹೃದಯದಲ್ಲಿ ವಿಸ್ತಾರ ಹೊಂದುವವು. ಜಾಗ್ರತಿಯಲ್ಲಿ ವಿಷಯ ಭೋಗಗಳ ಸಂಸ್ಕಾರವೇ, ಸ್ವಪ್ನಾ ವಸ್ಥೆಯಲ್ಲಿ ವಿಸ್ತಾರವಾಗಿ ಆಗುವದು. ಜಾಗ್ರತಿಯಲ್ಲಿ ನೋಡಿದ ಪದಾರ್ಥಗಳಂತೆ ಇರುವ ಪದಾರ್ಥಗಳನ್ನು ಮನಸ್ಸಿನಲ್ಲಿ ಉತ್ಪನ್ನ ಮಾಡಿಕೊಂಡು, ಅವುಗಳ ಉಪ ಭೋಗವನ್ನು ಮಾಡುವನು. ಸ್ವಪ್ನದಲ್ಲಿ ಆನೆ, ಕುದುರೆ, ಕತ್ತೆ, ಮನುಷ್ಯ ಪರ್ವತ, ಕೋಟೆ, ಪುರ, ನಗರ, ವಿಶಾಲವಾದ ನದಿ, ಸಮುದ್ರಗಳನ್ನೂ, ವಾಸ ನೆಯ ವೈಚಿತ್ರವನ್ನೂ ನೋಡುವನು. ಅದೇ ಸುಷುಪ್ತಿಯಲ್ಲಿ ಜಾಗ್ರತಿಯಿಲ್ಲ ಸ್ವಪ್ನವಿಲ್ಲ. ಅಂತಃಕರಣವನ್ನು ಲೀನಮಾಡಿ, ಪುರುಷನು ಅಹಂಕಾರ ರಹಿತ ನಾಗಿ ಉಳಿದಿರುವನು. ಜಾಗ್ರತಾವಸ್ಥೆಯ ಸಾಕ್ಷಿಯಾಗಿರುವ ಆತ್ಮನೇ ಜಾಗ್ರತಿ ಯಲ್ಲಿ ಇಂದ್ರಿಯ ವೃತ್ತಿಗಳನ್ನು (ಸಾಕ್ಷಿಭೂತನಾಗಿ) ನೋಡುವನು. ಅದೇ ಆತ್ಮನೇ ಸ್ವಪ್ನಾವಸ್ಥೆಯ ಅಭಿಮಾನಿಯಾಗಿ ಸ್ವಪ್ನಸ್ಥಿತಿಯಲ್ಲಿ ಅವಿದ್ಯಾ ವೃತ್ತಿ ಯನ್ನು ಸಾಕ್ಷೀಭೂತನಾಗಿ ನೋಡುವನು. ಅದೇ ಆತ್ಮನೇ ಸುಷುಪ್ತಿಯ ಸಾಕ್ಷಿ ಯಾಗಿ ಸುಷುಪ್ತಿಯಲ್ಲಿ (ಗಾಢವಾದ ನಿದ್ರೆಹತ್ತಿರುವ ಸ್ಥಿತಿಯಲ್ಲಿ) ಮೂಢ ವೃತ್ತಿ ಯನ್ನೂ ನೋಡುವನು. ಹೀಗೆ ಜಾಗ್ರತಿ, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳಲ್ಲಿ ಸಾಕ್ಷೀಭೂತನಾಗಿ ಅನೇಕ ವೃತ್ತಿಗಳನ್ನು ನೋಡುವವನು ಆತ್ಮ ನೊಬ್ಬನೇ ಇರುವನು. ಇಂದ್ರಿಯ, ಮನಸ್ಸು, ಬುದ್ಧಿ ಇವುಗಳು ಜಡವಾಗಿರು ವದರಿಂದ, ಅವುಗಳಲ್ಲಿ ಆತ್ಮನಂತೆ ದೃಷ್ಟತ್ವ (ಸಾಕ್ಷಿತ್ವವು) ಬರಲಾರದು.

ಆಶಂಕೆ:—"ಒಬ್ಬನೇ, ಆತ್ಮನು ಮೂರು ಅವಸ್ಥೆಗಳಲ್ಲಿ ಸಾಕ್ಷಿಯಾಗಿರು ವದು ಸಂಭವಿಸುವದಿಲ್ಲ. ಮೂರು ಅವಸ್ಥೆಗಳಲ್ಲಿ ಬೇರೆ ಅಭಿಮಾನಿಯಾಗಿರುವನು. ಮತ್ತು ಆಗ ಆ ಅವಸ್ಥೆಗಳಲ್ಲಿ ಒಬ್ಬನೇ ಸಾಕ್ಷೀಭೂತನಾಗಿ ಇರಲಾರನು" ಎಂದು ಸಂದೇಹ ಬಂದರೆ, ಅದಕ್ಕೆ ಪರಿಹಾರವನ್ನು ಹೇಳುವೆನು ಕೇಳಿರಿ.

ಮೂರೂ ಅವಸ್ಥೆಗಳಲ್ಲಿ ಆತ್ಮನೊಬ್ಬನೇ ಸಾಕ್ಷಿಯಾಗಿರುವನೆಂಬದೇ ಸಿದ್ಧಾಂತವು. ಜಾಗ್ರತಾವಸ್ಥೆಯಲ್ಲಿ ನಾನು ಎಚ್ಚರವಾಗಿರುವೆನು ಎಂಬದಕ್ಕೆ ಸಾಕ್ಷಿಯಾಗಿ ನೋಡುವವನೇ, ಸ್ವಪ್ನಾವಸ್ಥೆಯಲ್ಲಿಯ ವೃತ್ತಿಯನ್ನು ನೋಡು ವನು. ಇದೇ ಆತ್ಮನೇ, ನಾನು ಸುಖವಾಗಿ ಮಲಗಿದ್ದೆನು, ಎಂದು ಸುಷುಪ್ತಿ ಯಲ್ಲಿ ಸಾಕ್ಷೀಭೂತನಾಗಿ ನೋಡುವನು. ಹೀಗೆ ಮೂರೂ ಅವಸ್ಥೆಗಳಲ್ಲಿ

ಆತ್ಮನೊಬ್ಬನೇ ಸಾಕ್ಷಿಯಾಗಿರುವನು. ಯಾವನು ಯಾವ ಅವಸ್ಥೆಯನ್ನು ನೋಡಿರುವದಿಲ್ಲವೋ ಅವನು ಆ ಅವಸ್ಥೆಯ ಕಾರ್ಯಗಳನ್ನು ಹ್ಯಾಗೆ ಹೇಳುವನು? ಆದ್ದರಿಂದ ಮಾಯಾ ಅವಸ್ಥೆಗಳಲ್ಲಿ ಆತ್ಮನೊಬ್ಬನೇ ಸಾಕ್ಷಿಯೂ, ನಿರಂತರ ವ್ಯಾಪಕನೂ ಆಗಿರುವನು. ಮೂರು ಅವಸ್ಥೆಗಳಲ್ಲಿ ಆತ್ಮನ ಅನುಸಂಧಾನವು ಸ್ಮೃತಿರೂಪದಿಂದ ನಿರಂತರವಾಗಿರುವದು.

ಆಶಂಕೆ:—"ಜಾಗ್ರತೆಯಲ್ಲಿ ಆತ್ಮನು ಇಂದ್ರಿಯಗಳನ್ನು ನೋಡುವನು. ಸ್ವಪ್ನದಲ್ಲಿ ಆತ್ಮನು ನೋಡುವದೆಂದರೆ ಮನಸ್ಸು, ಸುಷುಪ್ತಿಯಲ್ಲಿ (ಗಾಢವಾಗಿ ನಿದ್ರೆ ಹತ್ತಿದಾಗ) ಅವನು ಅಜ್ಞಾನವನ್ನು ನೋಡುವನು. ಅಂದಬಳಿಕ, ಆತ್ಮನಿಗೆ ಇದೆಂಥ ಸಾಕ್ಷಿತ್ವವು?" ಸಿದ್ಧಾಂತವು. ಈ ಆಶಂಕೆಯ ಸಮಾಧಾನವನ್ನಾದರೂ ಮಾಡುವೆನು, ಸಾವಧಾನರಾಗಿ ಕೇಳಿರಿ ಮನಸ್ಸು, ಇಂದ್ರಿಯಗಳು ಕೇವಲ ಜಡವಾಗಿರುವವು. ಆದ್ದರಿಂದ ಅವುಗಳಿಗೆ ಸಾಕ್ಷಿತ್ವವು ಸಂಭವಿಸಲಾರದು. ಯಾವದು ಮನಸ್ಸಿನ ಚಾಲಕವಾಗಿರುವದೋ, ಯಾವದು ಇಂದ್ರಿಯಗಳ ಪ್ರಕಾಶವಾಗಿರುವದೋ, ಯಾವದು ಸುಷುಪ್ತಿಗೆ ಪ್ರಕಾಶವಾಗಿರುವದೋ ಅದೇ ಆತ್ಮನು ಒಬ್ಬನೇ ಮೂರು ಅವಸ್ಥೆಗಳಲ್ಲಿ ಸಾಕ್ಷಿತ್ವರೂಪದಿಂದ ಇರುವನು. ಸುಷುಪ್ತಿಯಲ್ಲಿ ಆತ್ಮನಿರುವದಿಲ್ಲೆಂದು ನೀವು ಅಂದರೆ ಅದು ತಪ್ಪು. ಯಾಕಂದರೆ, ನಾನು ನಿದ್ರಿಸ್ತನಾಗಿದ್ದೆನು, ಎಂದು ತಿಳಿಯುವವರು ಯಾರು? ಆತ್ಮನು ಪ್ರಕೃತಿಯ ಆಚೆಗೆ ಇರುವನು ಅಂದರೆ ಪ್ರಕೃತಿ ಕಾರ್ಯಗಳಿಂದ ಅಲಿಪ್ತನೂ, ಪ್ರಕೃತಿಗೆ ನಿಲುಕದವನೂ ದೇಹಾದಿ ಅವಸ್ಥೆಗಳಲ್ಲಿ ಪ್ರಕಾಶಕನೂ, ಇಂದ್ರಿಯಗಳ ನಿಯಾಮಕನೂ ಆಗಿರುವನು. ಇಂದ್ರಿಯಗಳೇನು ಆತ್ಮವಲ್ಲ. ಯಾಕಂದರೆ, ಇಂದ್ರಿಯಗಳ ಕರ್ಮವು ಏಕದೇಶೀಯವಾಗಿದ್ದು, ಆತ್ಮನು ಸರ್ವಕರ್ತನೂ, ಸರ್ವೋತ್ತಮನೂ ಆಗಿರುವನು. ಅವನು (ಆತ್ಮನು) ಕಾರ್ಯಗಳನ್ನು ಮಾಡಿದರೂ, ಅವನು ನಿಷ್ಕರ್ಮಿ (ಮಾಡದೆ ಇರುವವನು) ಯಾಗಿರುವನು. ಮನಸ್ಸು ಆತ್ಮನಲ್ಲ. ಯಾಕಂದರೆ ಮನಸ್ಸಿನ ಕರ್ಮಗಳು ಸಂಕಲ್ಪವಿಕಲ್ಪಾತ್ಮಕವಾಗಿರುವವು. ಆದರೆ ಆತ್ಮನು ನಿರ್ವಿಕಲ್ಪನೂ ನಿರುಪಮನೂ, ಜಗತ್ತಿನ ವಿಶ್ರಾಂತಿಯ ಸ್ಥಾನವೂ ಆಗಿರುವನು. ಆತ್ಮನು ಸುಷುಪ್ತಿಯ ಸುಖದ ಭೋಗದ ಸಾಕ್ಷಿಯೂ ಆಗಿರುವನು. ಮೂರು ಲೋಕಗಳಲ್ಲಿ ಎಲ್ಲಕ್ಕೂ ಸಾಕ್ಷಿಭೂತವಾಗಿ ನೋಡುವದೇ ಅವನ ರೂಪವು. ಇಂಥ ಆತ್ಮನು ಒಬ್ಬನೇ ಇರುವನು. ಇದು ಸತ್ಯವೆಂದು ತಿಳಿಯಿರಿ.

## ಮಾಯೆಯ ಮೂಲಕ ಗುಣಾವಸ್ಥೆಯಲ್ಲಿ ಮನಸ್ಸಿನ ವ್ಯಾಪಕತೆಯೂ, ಭವಬಂಧನತೆಯೂ.

ಮುನಿಗಳೇ, ನಾನು ನಿಮಗೆ ಇಲ್ಲಿಯವರೆಗೆ ಶ್ರುತಿ-ಶಾಸ್ತ್ರಾರ್ಥ ಸಮ್ಮತವಾದ ಯುಕ್ತಿಗಳನ್ನು ಹೇಳಿರುವೆನು. ಅವುಗಳ ವಿಚಾರವನ್ನು ಮಾಡಿ, ಪರಮಾರ್ಥವನ್ನು ಸಾಧಿಸಬೇಕು. ಈ ಪರಮಾರ್ಥ ಸಾಧನಕ್ಕೆ ಮೊದಲು ವಿಚಾರದಿಂದ ಸಂಸಾರದಲ್ಲಿಯ ಪಾಶದ ತೊಡಕುಗಳನ್ನು ಬಿಡಿಸಿಕೊಳ್ಳಬೇಕು. ಈ ಸಂಸಾರದ ತೊಡಕುಗಳಿಗೆ ಮೂಲ ಕಾರಣವೆಂದರೆ ತ್ರಿಗುಣಗಳು. ಈ ಗುಣಾವಸ್ಥೆಯಲ್ಲಿ ಮನಸ್ಸು ಯಾವಾಗಲೂ ವ್ಯಾಪಿಸಿರುವದು. ಅದಕ್ಕೆ ನನ್ನ ಮಾಯೆಯೇ ಮೂಲಕಾರಣವು. ಈ ಮಾಯೆಯು ನನ್ನ ಮೇಲೆ ಆವರಣವನ್ನು ಹಾಸಿ ಆಚ್ಛಾದನ ಮಾಡಿಬಿಟ್ಟಿದೆ. ಅದರಿಂದ ಜನರು ನನ್ನನ್ನು ನೋಡಲಾರರು; ಹಾಗು ತಿಳಿಯಲಾರರು. ಈ ಆವರಣದಿಂದ ನಾನು ಅವರಿಗೆ ಕಾಣುವದಿಲ್ಲ. ಈ ಮಾಯೆಯು ನನಗಿಂತ ಸಬಲವಾಗಿರುವದು. ಅದು ದುರತ್ಯಯವಾಗಿದ್ದು, ಕೂಡಲೆ ನನ್ನನ್ನು ಆವರಿಸಿ ಬಿಟ್ಟಿರುವದು. ಕಣ್ಣುಗಳೊಳಗಿನ ನೀರು ಕಣ್ಣುಗಳಲ್ಲಿಯೇ ಗಟ್ಟಿಯಾಗಿ ಹೆಪ್ಪುಗಟ್ಟಿಕೊಂಡು, ಕಣ್ಣುಗಳಿಗೇ ಆಚ್ಛಾದನವಾದಂತೆ ಆಗಿ, ಆ ಕಣ್ಣುಗಳಿಗೆ ಅನ್ಯ ವಸ್ತುಗಳನ್ನು ನೋಡಗೊಡುವದಿಲ್ಲ. ಪೂರ್ಣ ಚಂದ್ರನು ಅತ್ಯಂತ ನಿರ್ಮಲನಾಗಿದ್ದರೂ, ಅದರ ಮೇಲೆ ಪೃಥ್ವಿಯ ಪ್ರತಿಬಿಂಬವು ಬೀಳಲು, ಆ ಚಂದ್ರಮಂಡಲವು ಸಲಾಂಛನ ಅಂದರೆ ಕಲಂಕಯುಕ್ತವಾಗಿ ಜನರಿಗೆ ಕಾಣುವದು. ಪೃಥ್ವಿಗೂ, ಚಂದ್ರನಿಗೂ ಇರುವ ಅಂತರವನ್ನು ವಿಚಾರ ಮಾಡಿ ನೋಡಿದರೆ, ಪೃಥ್ವಿಗೂ, ಚಂದ್ರನಿಗೂ ಬಹು ದೂರದ ಅಂತರವಿರುವದು. ಪೃಥ್ವಿಯ ಬಿಂಬವು ಚಂದ್ರಮಂಡಲದ ಮೇಲೆ ಬಿದ್ದುದರಿಂದ, ಆ ಚಂದ್ರಮಂಡಲವು ನಿಜವಾಗಿ ಸಲಾಂಛನವಾಗಿರುವದೆಂದು ತಿಳಿಯುವರು ಪೃಥ್ವಿಯ ಬಿಂಬವು ಚಂದ್ರಮಂಡಲದ ಮೇಲೆ ಬಿದ್ದದ್ದು ನಿಜವೆಂದು ಜನರು ಅನ್ನುವರು. ಆದರೆ ಅದು ಸತ್ಯವಲ್ಲ. ಈ ಪ್ರಕಾರ ಮಾಯೆಯು ನನ್ನನ್ನು ಮುಟ್ಟಿರುವದೂ ಇಲ್ಲ; ಅದರ ಆಚ್ಛಾದನವಾದರೂ ನನಗೆ ಆಗಿರುವದಿಲ್ಲ. ಆದರೂ ಮಿಥ್ಯಾಭಾಸದಿಂದ ಜನರು ಆ ಮಾಯೆಗೆ ಮರುಳಾಗಿರುವರು. ಇದರಿಂದ ಅವರು ಅಹಂಕರ್ತೃತ್ವವನ್ನು ತಮ್ಮ ತಲೆಯ ಮೇಲೆ ಹೊತ್ತು ಮಿಥ್ಯವಾದ ಗುಣಾವಸ್ಥೆಯಲ್ಲಿ ತಮ್ಮ ಮನಸ್ಸನ್ನು ಸೇರಿಸಿರುವರು. ಇದರಿಂದ ಅವರು ವಾಸನಾಯುಕ್ತವಾದ

ವಿಷಯ ಭೋಗಗಳನ್ನು ಹೆಚ್ಚಿಸುವರು. ಅಂದರೆ ಜನರಲ್ಲಿ ಗುಣಾವಸ್ಥೆಯಿಂದ ಅಹಂಕಾರವು ಸೇರುವದು. ಈ ಅಹಂಕಾರದಿಂದ ವಿಷಯಭೋಗ ವಾಸನೆಯು ಬೆಳೆದು ಅವರಲ್ಲಿ ವಿಷಯಗಳು ಬೆಳೆಯುತ್ತ ಹೋಗುವವು. ಹೀಗೆ ಉಭಯ ದೇಹಬಂಧನಗಳಿಂದ ಆತ್ಮನಿಗೆ ಮಿಥ್ಯವಾದ ಜೀವತ್ವವು ಬಂದಿರುವದು. ಗುಣ ಗಳಿಂದ ಮನಸಿಗೆ ಮೂರು ಅವಸ್ಥೆ ಳು ಬರುವವು ಮತ್ತು ಅವು ಅವಿದ್ಯೆಯಿಂದ ನನ್ನ ಮೇಲೆ ಆರೋಪಿತವಾಗುತ್ತವೆ. ಆದರೆ ವಸ್ತುತಃ ಅವು ಇರುವದಿಲ್ಲೆಂಬ ದೃಢ ನಿಶ್ಚಯವನ್ನು ಮಾಡಿ ನನ್ನನ್ನು ಹೃದಯದಲ್ಲಿ ನಿತ್ಯವಾಗಿ ಭಜಿಸುತ್ತ ಹೋಗ ಬೇಕು. ಗುಣಗಳಿಂದ ಮನಸ್ಸಿಗೆ ಮೂರೂ ಅವಸ್ಥೆಗಳು ಬಂದಿರುತ್ತವೆಂದು ನಿಶ್ಚಯಮಾಡಿಕೊಂಡು, ಉಭಯ ಬಂಧನಗಳನ್ನೂ, ಗುಣಾವಸ್ಥೆಗಳನ್ನು ತಂದ ಗುಣಗಳನ್ನೂ, ಮಾಯೆಯನ್ನೂ ಛೇದಿಸುವದಕ್ಕಾಗಿ ನನ್ನನ್ನು ಭಜಿಸಬೇಕು; ಮತ್ತು ನನ್ನನ್ನು ಭಜಿಸುವ ಯುಕ್ತಿಗಳನ್ನು ಸ್ಪಷ್ಟವಾಗಿ ವಿವರಿಸಬೇಕು.

## ಭವಬಂಧನ ನಿರಸನಕ್ಕಾಗಿ ಸಾಧುಸೇವೆಯ ಅವಶ್ಯಕತೆ.

ಯುಕ್ತಿಗಳ ಅನುಮಾನವನ್ನು ಮಾಡುತ್ತ ಹೋದ ಹಾಗೆಲ್ಲ, ಜ್ಞಾನ ವಾದವು ಅನುಮಾನಿಕವಾಗುವದು. ಅದರಿಂದ ಅವಿದ್ಯಾಬಂಧನವು ಕಡಿದು ಹೋಗುವದಿಲ್ಲ. ಆದ್ದರಿಂದ ಸಾಧುಸಜ್ಜನರ ಸೇವೆಯನ್ನು ಅವಶ್ಯವಾಗಿ ಮಾಡ ಬೇಕು. ಸಾಧುಗಳಲ್ಲಿಯಾದರೂ ಸಾಧುತ್ವವು ಪೂರ್ಣವಾದ ಸದ್ಗುರುಚರಣ ಗಳನ್ನು ಸೇವಿಸಬೇಕು. ಸಾಧುಸಜ್ಜನ ಸದ್ಗುರುಸೇವೆಯಿಂದ ಭವಬಂಧನ ನಿರಸನವಾಗುವದು.

## ಸಾಧುಗಳ ಉಪದೇಶದಿಂದ ಜ್ಞಾನಖಡ್ಗದ ಪ್ರಾಪ್ತಿಯೂ, ಅದರಿಂದ ದೇಹಾಭಿಮಾನ ಛೇದನವೂ.

ಸಾಧ ಗಳ ಸದುಕ್ತಿಗಳು ಸಾಧಕನಿಗೆ ಯಾವಾಗಲೂ ಶ್ರುತ್ಯರ್ಥಗಳನ್ನೇ ಉಪದೇಶಿಸುವವು. ಅದರಿಂದ ಜ್ಞಾನವೆಂಬ ಖಡ್ಗವು ದೊರೆಯುವದು. ಈ ಖಡ್ಗವು ಬರಬರುತ್ತ ಬುದ್ಧಿಯ ಕೈಯಲ್ಲಿ (ಹಸ್ತಗತ) ಸೇರುವದು. ಈ ಜ್ಞಾನ ವೆಂಬ ಖಡ್ಗವನ್ನು ವೈರಾಗ್ಯ ನೈರಾಶ್ಯಗಳಿಂದ ಕೂಡಿದ ಸಾಣೆಯಕಲ್ಲಿಗೆ ಹಚ್ಚಿ ಚನ್ನಾಗಿ ಸಾಣೆಹಿಡಿದು, ಅದನ್ನು ಸತೇಜವಾಗಿ ಮಾಡಬೇಕು. ಬಳಿಕ ಅದನ್ನು ಸಾವಧಾನವಾಗಿಯೂ, ನಿಃಶಂಕವಾಗಿಯೂ ಧೈರ್ಯದಿಂದಲೂ ಕೈಯಲ್ಲಿ ದೃಢವಾಗಿ ಹಿಡಿಯಬೇಕು. ಜ್ಞಾನವೆಂಬ ಈ ಶಸ್ತ್ರಕ್ಕೂ ತನಗೂ ಐಕ್ಯವಾಗು

ವಂತೆ ಏಕಾಗ್ರಚಿತ್ತದ ಸಾಧನವನ್ನು ದೃಢವಾಗಿ ಸಾಧಿಸಬೇಕು. ಈ ಸಾಧನೆ ಯಿಂದ ಅಂದರೆ ಅನುಮಾನದಿಂದಲೂ, ಸಾಧುಗಳ ಉಪದೇಶದಿಂದಲೂ, ವೇದ ವಚನಗಳಿಂದಲೂ ತೀಕ್ಷ್ಣವಾಡಿದ ಜ್ಞಾನವೆಂಬ ಖಡ್ಗದಿಂದ, ಸಮಸ್ತ ಸಂಶಯು ಗಳ ಗಂಟನ್ನು (ಅಹಂಕಾರವನ್ನು) ಕತ್ತರಿಸಿ ಪರಮಾತ್ಮನನ್ನು ಭಜಿಸಬೇಕು. ಈ ಅಭಿಮಾನವೆಂದರೆ ಸಾಮಾನ್ಯವಲ್ಲ. ಇದು ಸಕಲ ಸಂಶಯಗಳಿಗೆ ಮೂಲ ವಾಗಿರುತ್ತದೆ. ಅದು ದೇಹದುಃಖವನ್ನು ಎಬ್ಬಿಸುವದು. ಇದರಿಂದ ಪುರುಷ ನಿಗೆ ವಿಷಯಗಳ ಛಂದವು ಹತ್ತುವದು. ಇದು ಕಾಮಕ್ರೋಧಗಳನ್ನು ಬೆಳಿಸು ವದು; ಇದು ಮೂರು ಗುಣಗಳನ್ನು ಅಭಿವೃದ್ಧಿಗೆ ತರುವದು; ಇದು ನಿತ್ಯ ಶುದ್ಧ ಬದ್ಧವಾದ ಆತ್ಮನಿಗೂ ನಿರುಪಾಧಿಕವಾದ ಆತ್ಮನಿಗೂ ಜೀವತ್ವವನ್ನು ತರು ವದು; (ಈ ನಿರುಪಾಧಿಕವಾದ ಆತ್ಮನನ್ನೂ ಜೀವವಾಗಿ ಮಾಡಿ ಕೂಡಿಸುವದು) ಇದರಿಂದ ಜೀವನಿಗೆ ಜನ್ಮಮರಣಗಳು ದುರ್ನಿವಾರವಾಗಿ ಬೆನ್ನಹತ್ತಿರುವವು. ಇದು ಸಕಲ ಅನರ್ಥಗಳ ದಾತೃವು; ಇದರ ಪ್ರೀತಿಯ ಮಗಳೆಂದರೆ ಮಮ ತೆಯು. ಈ ಮಮತೆಯನ್ನು ಮಾಯೆಯೆಂಬ ಮಾತೆಯು ರಕ್ಷಣ ಮಾಡಿ ಬೆಳಿ ಸುವಳು; ಈ ಮಾಯಾಮಾತೆಯ ಸತ್ತೆಯು (ಅಧಿಕಾರವು) ಆ ಮಮತೆಯೆಂಬ ಕನ್ಯೆಯ ಮೇಲೆ ಬಹಳವಾಗಿರುವದು. ಹೀಗಿರುವಾಗ ಸಾಧಕನೆಂಬ ಸುಭಟನು ಸಾಧುಸೇವೆಯಿಂದ ಪ್ರಾಪ್ತವಾದ ಜ್ಞಾನವೆಂಬ ಸತೇಜವೂ ಲಖಲಖೀಯಮಾ- ನವೂ ಆದ ಖಡ್ಗವನ್ನು ಕೈಯಲ್ಲಿ ಹಿಡಿದುಕೊಂಡು ಸಮರಾಂಗಣದಲ್ಲಿ ಸರಿಯಾಗಿ ನಿಂತುಕೊಂಡು ಈ ಅಭಿಮಾನವೆಂಬ ಶತ್ರುವನ್ನು ಈ ಶಸ್ತ್ರದಿಂದ ಒಳ್ಳೇ ಬಲ ವಾಗಿ ಹೊಡೆಯಬೇಕು. ಜ್ಞಾನವೆಂಬ ತೀಕ್ಷ್ಣವಾದ ಶಸ್ತ್ರದಿಂದ ಆ ಶತ್ರುವನ್ನು ಹ್ಯಾಗೆ ಹೊಡೆಯಬೇಕೆಂದರೆ, ಆ ಶಸ್ತ್ರದ ಒಂದೇ ಹೊಡತದಿಂದ ಮಾಯೆ, ಮಮತೆ, ಅಭಿಮಾನವೆಂಬ ತ್ರಿಪುಟಿಯ ಭೇದನವು ಏಕಕಾಲಕ್ಕೆ ಆಗಬೇಕು. ಈ ಜ್ಞಾನಶಸ್ತ್ರದಿಂದ ಭೋಗ್ಯ, ಭೋಗ, ಭೋಕ್ತೃ, ಕರ್ಮ, ಕಾರ್ಯ, ಕರ್ತೃ ಧ್ಯೇಯ, ಧ್ಯಾನ, ಧ್ಯಾತೃ ಎಂಬ ತ್ರಿಪುಟಿಗಳನ್ನು ಕಡಿದು ಬಿಡಬೇಕು. 'ಅಹಂ' (ನಾನು)'ಕೋಽಹಂ' (ನಾನು ಯಾರು) 'ಸೋಽಹಂ' (ನಾನೇ ಅವನು) ಎಂಬ ಸ್ವಭಾವವನ್ನು ಭೇದಿಸಿಬಿಡಬೇಕು ಹೀಗೆ ಅಹಂಭಾವವನ್ನು ಕತ್ತರಿಸಿದ ಬಳಿಕ ಸಾಧಕನಿಗೆ ನಿಜಪದ ಅಥವಾ ಆತ್ಮೈಕ್ಯ ಸ್ಥಿತಿಯ ಪದದಲ್ಲಿ ಸ್ಥಾನವು ದೊರೆಯುವದು. ಆ ಬಳಿಕ ಅವನು ಸ್ವಯಮೇವ ಬ್ರಹ್ಮನೇ ಆಗುವನು.

ಆಶಂಕೆಯು:—"ನೀವು ಇಲ್ಲಿಯ ವರೆಗೆ ಹೇಳಿದ ರೀತಿಯೆಲ್ಲ ಕೇವಲ

ಶಬ್ದಜ್ಞಾನದ ವ್ಯವಹಾರವೇ ಆಗಿದೆ. ಇದರಲ್ಲಿ ಅನುಭವ ರಹಿತವಾದ ಮಾತುಗಳ ಕಡಕಡಾಟವು ಮಾತ್ರ ಹೆಚ್ಚಾಗಿರುವದು. ಹೀಗಿರುವಾಗ ಇಂಥ ಶಾಬ್ದಿಕ-ಜ್ಞಾನದಿಂದ ಅಹಂಕಾರವನ್ನು ಛೇದಿಸುವದು ಹ್ಯಾಗೆ ಶಕ್ಯವಾದೀತು? ಕೇವಲ ಶಬ್ದ ಮಾತ್ರದಿಂದ (ಶಾಬ್ದಿಕ-ಜ್ಞಾನದಿಂದ) ಅಭಿಮಾನವು ನಾಶಹೊಂದಬೇಕಾಗಿದ್ದರೆ, ಕೇವಲ ಶಬ್ದಜ್ಞಾನ ನಿಪ್ಣಾತರಾದ ವಿದ್ವಜ್ಜನರು ಯಾಕೆ ಅಭಿಮಾನ ಮಗ್ನರಾಗುತ್ತಿದ್ದರು? ಅಭಿಮಾನವು ನಮ್ಮೆದುರಿಗೆ ಸಮ್ಮುಖವಾಗಿ ಇರುತ್ತಿರುವಾಗ, ನಾವು ಕೇವಲ ಶಾಬ್ದಿಕ-ಜ್ಞಾನವೆಂಬ ಶಸ್ತ್ರದಿಂದ ಹೊಡೆಯಲುದ್ಯುಕ್ತರಾದರೆ, ಆ ಅತರ್ಕ್ಯವಾದ ಅಹಂಕಾರವು ಎಂದಿಗೂ ಶಾಬ್ದಿಕ-ಜ್ಞಾನದಿಂದ ನಾಶವಾಗಲಾರದು. ಅಂದಬಳಿಕ ಅಥವಾ ಸಾರಾಂಶ ಶಬ್ದ ಮಾತ್ರದಿಂದ ಅಭಿಮಾನ, ಅಹಂಕಾರಗಳ ನಾಶವಾಗಲಾರದು; ಆದರೆ ಅಪರೋಕ್ಷ ಸಾಕ್ಷಾತ್ಕಾರ (ಆತ್ಮಾನುಭವ) ದಿಂದ ಮಾತ್ರ ಅಭಿಮಾನ, ಅಹಂಕಾರಗಳ ನಾಶವಾಗುವದು ಸತ್ಯವು."

ಸಿದ್ಧಾಂತವು:—"ಮುನಿಗಳೇ, ನಿಮ್ಮ ಆಶಂಕೆಯು ವಿಚಾರವನ್ನು ಮಾಡಿ ಅದಕ್ಕೆ ಸಮಾಧಾನವನ್ನು ಹೇಳಿ, ಒಂದು ಸಿದ್ಧಾಂತ ಮಾತನ್ನು ನಿಧಾನವಾಗಿ ಹೇಳುವೆನು ಕೇಳಿರಿ. ನೀವು ಹೇಳಿದಂತೆ ಶಾಬ್ದಿಕ-ಜ್ಞಾನದಿಂದ ಅಭಿಮಾನವು ನಾಶವಾಗಲಾರದು ಅಭಿಮಾನವನ್ನೊಳಕೊಂಡ ತ್ರಿಪುಟಿಯು ನಾಶವಾಗಬೇಕಾದರೆ, ಅಪರೋಕ್ಷ ಸಾಕ್ಷಾತ್ಕಾರವು (ಆತ್ಮಾನುಭವವು) ಬೇಕು. ಅದಕ್ಕಾಗಿ, ಸಾಧಕನು ಸಾವಧಾನದಿಂದಲೂ, ಅನನ್ಯ ಭಾವದಿಂದಲೂ ಸದಾಸರ್ವದಾ ನನ್ನ ಭಜನೆಯನ್ನು ಮಾಡಬೇಕು; ಅಥವಾ ಸದ್ಗುರುವೇ ಸಾಕ್ಷಾತ್ ಪರಮಾತ್ಮನೆಂದು ತಿಳಿದು, ಸದ್ಗುರುವಿನ ಶ್ರೀ ಚರಣ ಸೇವೆಯನ್ನು ಮಾಡಬೇಕು; ನಾನು (ಪರಮಾತ್ಮನು) ಹಾಗು ಸದ್ಗುರುಮೂರ್ತಿ ಇವರಲ್ಲಿ ಕಲ್ಪಾಂತರದಲ್ಲಿಯಾದರೂ ಸ್ವಲ್ಪಾದರೂ ಭೇದವಿಲ್ಲ. ನಾನೇ ಸದ್ಗುರುವು; ಸದ್ಗುರುವೇ ನಾನು. ನನ್ನ ರೂಪವೂ, ಸದ್ಗುರು ರೂಪವೂ ಒಂದೇ ಇರುವದು. ಇಂಥ ಅಭೇದ (ಐಕ್ಯ) ಭಾವದಿಂದ ಯಾವ ಸಾಧಕನು ನನ್ನನ್ನು (ಪರಮಾತ್ಮನನ್ನು) ಭಜಿಸುವನೋ, ಅವನಿಗೆ ಜ್ಞಾನವು (ಆತ್ಮಾನುಭವಜ್ಞಾನವು) ಸಹಜವಾಗಿ ದೊರೆಯುವದು. ಸಾಧಕನ ಈ ಪ್ರಕಾರದ ಭಜನ ಸ್ಥಿತಿಯಿಂದ, ಅವನಿಗೆ ಸಹಜವಾಗಿ ಜ್ಞಾನವೆಂಬ ಖಡ್ಗದ ಪ್ರಾಪ್ತಿಯಾಗುವದು. ಈ ಜ್ಞಾನಖಡ್ಗವು ಸಾಧಕನ ಕೈವಶವಾಗಲು, ಶತ್ರುಗಳ ನಾಶಕ್ಕೆ ತಡವಾಗಲಾರದು. ಈ ಜ್ಞಾನವೆಂಬ ಶಸ್ತ್ರದ ತೇಜದಿಂದ ಸಾಕ್ಷಾತ್ ಯಮನೂ ಥರಥರ ನಡಗುವನು. ಈ ಶಸ್ತ್ರದ ಭಯದಿಂದ ಮಾಯಾ

ಮಮತಾಭಿಮಾನಗಳು ಯಾರೂ ಸಮೂಲವಾಗಿ ಜೀವಪಣವನ್ನು (ಜೀವತ್ವ ವನ್ನು) ಬಿಟ್ಟು ಓಡಿಹೋಗುವವು. ಸಾಧಕನು ತನ್ನ ಜ್ಞಾನವೆಂಬ ಖಡ್ಗದಿಂದ ಮಾಯಾ-ಮಮತಾಭಿಮಾನಗಳನ್ನು ಹೊಡೆಯುವದಕ್ಕಿಂತ ಮೊದಲೇ ಅವು ಭಯದಿಂದ ಓಡಿಹೋದ ಬಳಿಕ ಸಾಧಕನು ಆ ಶಸ್ತ್ರದಿಂದ ಅವುಗಳನ್ನು ಹೊಡೆ ಯುವದು ಹ್ಯಾಗೆ? ಅವುಗಳ ಮೇಲೆ ಜ್ಞಾನಶಸ್ತ್ರದ ಪೂರಾ ಹೊಡತವನ್ನು ಹಾಕಬೇಕೆಂದು ಹೋಗುವದರೊಳಗೆ ಆ ಅಹಂಮಮತೆಗಳು ಅಲ್ಲಿ ಇರುವದೇ ಇಲ್ಲ. ಅವಿದ್ಯೆಯೂ ಭಯದಿಂದ ತಾನೇ ಓಡಿ ಹೋಗುವದೆಂದ ಬಳಿಕ ಅದು ಅವನ ಮುಂದೆ ಎಲ್ಲಿಂದ ಬಂದು ನಿಲ್ಲಬೇಕು? ಅದರ (ಅವಿದ್ಯೆಯ) ಅಭಾವವೇ ಎಲ್ಲಿಯಾದರೂ ಕಾಣುವದು.

ಆಶಂಕೆ:—"ಪರಮಾತ್ಮನ ಭಜನೆಯನ್ನು ಎಲ್ಲಿ ಮಾಡಬೇಕು? ಭಗ ವಂತನೇ, ನಿನ್ನ ಮಹಿಮೆಯು ಸ್ವರೂಪವು ಅತರ್ಕ್ಯವೂ, ಅತಿ ಸೂಕ್ಷ್ಮವೂ, ನಿರ್ಗುಣವೂ ಆಗಿರುವದು. ಇಂಥ ನಿನ್ನನ್ನು (ಪರಮಾತ್ಮನನ್ನು) ಭಜಿಸುವ ದಕ್ಕೆ ಸ್ಥಾನವು ಯಾವದಿರುವದೆಂಬದು ನಮಗೆ ತಿಳಿಯದಂತಾಗಿದೆ."

## ನಿಜ ಹೃದಯದಲ್ಲಿ ಆತ್ಮಾರಾಮನ ಭಜನೆಯ ಮಾಹಾತ್ಮ್ಯ.

ಸಮಾಧಾನ ಸಿದ್ಧಾಂತ:—"ಮುನಿಗಳೇ, ನಿಮ್ಮ ಶಂಕೆಯ ನಿರಸನವನ್ನು ಮಾಡುವೆನು. ನಿಮ್ಮ ಮನಸ್ಸು ಪರಮಾತ್ಮನ ಭಜನವನ್ನು ಯಾವ ಸ್ಥಾನದಲ್ಲಿ ಮಾಡಬೇಕೆಂದು ಕಲ್ಪನೆ ಮಾಡಿದರೆ, ಅತ್ಯಂತ ಸುಗಮವಾದ ಭಜನ ಸ್ಥಾನ ವನ್ನು ನಿಮಗೆ ನಿರ್ಧಾರ ಮಾಡಿ, ಹೇಳುವೆನು. ಅದನ್ನು ಸಾವಧಾನವಾಗಿ ಕೇಳಿರಿ. ಪರ್ವತಗಳನ್ನು ದಾಟಿ ಹೋಗಲಿಕ್ಕೆ ಬೇಡ, ಗಿರಿಗುಹೆಗಳಲ್ಲಿ ಸೇರಲಿಕ್ಕೆ ಬೇಡ, ಪ್ರಯಾಸದಿಂದ ಯಾತಾಯಾತ ಮಾಡಲಿಕ್ಕೆ ಬೇಡ; ಪರ ಮಾತ್ಮನ ಭಜನಕ್ಕೆ ಇಂಥ ಯಾವ ಸಾಯಾಸದ ಕಾರ್ಯಗಳನ್ನು ಮಾಡುವದು ಅವಶ್ಯವಿಲ್ಲ. ಯಾವ ಸ್ಥಾನದಲ್ಲಿ ನನ್ನ ದರ್ಶನವಾಗಬೇಕೋ ಆ ಸ್ಥಾನವು ಎಲ್ಲಿಯೂ ದೂರದಲ್ಲಿರುವದಿಲ್ಲ. ಪುರುಷೋತ್ತಮನಾದ ನಾನು ವಾಸಮಾಡುವ ಭಜನಸ್ಥಾನವು ನಿರುಪಮವಾಗಿದ್ದು ಅದರ ಪ್ರಾಪ್ತಿಗೆ ಯಾವ ಕಷ್ಟವನ್ನೂ ಪಡ ಬೇಕಾಗಿಲ್ಲ. ಆ ಸ್ಥಾನವು ಅತ್ಯಂತ ಸುಗಮವಾಗಿದೆ. ನನ್ನ ಸ್ಥಾನವು ಭಕ್ತರ ವಿಶ್ರಾಂತಿಯ ನಿಜಸ್ಥಾನವಾಗಿದೆ. ಸರ್ವಸುಖಗಳ ಆರಾಮ (ತೋಟ) ವಾದ ನಿಜ ಹೃದಯವೇ ಪರಮಾತ್ಮನ ನಿಜವಾದ ವಸತಿಸ್ಥಾನವು. ಅಲ್ಲಿ ಆತ್ಮಾರಾಮ ನಾದ ಭಗವಂತನು ಸದಾ ಸರ್ವಕಾಲ ವಾಸಮಾಡಿರುವನು. ಅವನು

ಗಲೂ ನಿರ್ಮಲವಾಗಿರುವವು. ಆದರೆ ಆ ಸೂರ್ಯನ ಪ್ರಕಾಶದಲ್ಲಿ ಮೃಗಜಲದ ಆಭಾಸವಾಗುವದು. ಇದರಂತೆ ಕೇವಲ ಶುದ್ಧವಾದ ಪರಬ್ರಹ್ಮವಸ್ತುವಿನಲ್ಲಿ ಸಂಸಾರದ ಆಭಾಸವಾಗುವದು. ಶುದ್ಧವಸ್ತುವಿನ ಆಭಾಸಕ್ಕೇ ಜನರು ಸಂಸಾರವೆಂದು ನಂಬಿ ಶುದ್ಧವಸ್ತುವೇ ಸಂಸಾರವೆಂದು ಬಾಷ್ಕಳರಾದ ಅಜ್ಞಾನಿಗಳು ಅನ್ನುವರು. ಶುದ್ಧವಸ್ತುವಾದ ಪರಬ್ರಹ್ಮನಲ್ಲಿ ಮಾಡುವ ಸಂಸಾರದ ಆರೋಪಕ್ಕೆ ನಾನೇ (ಪರಮಾತ್ಮ = ಪರಬ್ರಹ್ಮನೇ)ಅಧಿಷ್ಠಾನವು. ಶುದ್ಧವಸ್ತುವು ತಾನು ಶುದ್ಧ ಇರುವಂತೆಯೇ ಇರುವದು. ಇದಕ್ಕೆ ದೃಷ್ಟಾಂತ ತುದಿಗೆ ಬೆಂಕಿಯಿರುವ ಕಟ್ಟಿಗೆ(ಕೊಳ್ಳಿಯು= ಉರಿಯುವ ಅಥವಾ ಬೆಂಕಿಯಿರುವ ಕೊಳ್ಳಿಯು) ಯನ್ನು ಗರಗರ ತಿರಿಗಿಸಲು, ದುಂಡಗಿರುವ ಕೆಂಪು ಬಣ್ಣದ ವರ್ತುಲಾಕಾರ ಬಳೆಯಂತೆ ಕಾಣುವ ಬೆಂಕಿಯು ವರ್ತುಲಾಕಾರ ಕಂಕಣದ (ಬಳೆಯು) ಆಕಾರವು ಕಾಣುವದು. ಆದರೆ ಆ ವರ್ತುಲಾಕಾರವಾದ ಬೆಂಕಿಯು ಕಂಕಣವು ಮಿಥ್ಯವು. ಆದರೆ ಈ ಮಿಥ್ಯವಾದ ಆಕಾರವಾದ ಅಗ್ನಿಯು ತೇಜದಿಂದ ಆಭಾಸವಾಗಿರುವದು. ತಿರುಗುತ್ತಿರುವ ಬೆಂಕಿಯು ಕೊಳ್ಳಿಯು ದುಂಡನ್ನ ಚಕ್ರಾಕಾರವು ಸುಳ್ಳು. ಆದರೆ ಇದರ ನಿರ್ಧಾರವನ್ನು ಕೇಳಿರಿ.

ಇದಕ್ಕೆ ಅಧಿಷ್ಠಾನವು ಅಗ್ನಿಯು, ಈ ಅಗ್ನಿಯು ಸತ್ಯವು; ಚಕ್ರವು ಮಿಥ್ಯವು. ಇದರಂತೆ ಸಂಸಾರದ ನಿಶ್ಚಯವನ್ನು ವಿಚಾರದಿಂದ ಮಾಡಬೇಕು. ಬ್ರಹ್ಮವು ಸತ್ಯವು, ಸಂಸಾರವು ಮಿಥ್ಯವು. ಅಲ್ಲಿ ಇರುವ ಆಧಿದೈವಿಕ, ಆಧಿಭೌತಿಕ; ಆಧ್ಯಾತ್ಮಿಕಗಳು ಬೆಂಕಿಯು ಕೊಳ್ಳಿಯು ವರ್ತುಲಾಕಾರ ಚಕ್ರದಂತೆ ಮಿಥ್ಯವಾಗಿರುವ ತ್ರಿಗುಣಗಳಿಂದ ಕೂಡಿದ ಮಾಯೆಯು ಪರಿಣಾಮುಗಳೆಲ್ಲ ಈ ಕೊಳ್ಳಿಯು ಚಕ್ರಗಳಂತೆ ಮಿಥ್ಯವಾಗಿರುವವು. ಅವು ಕೇವಲ ಭಾಸವಾಗುವವು ಮಾತ್ರ, ಕೊಳ್ಳಿಯನ್ನು ದುಂಡಗೆ ತಿರುಗಿಸುವದರಿಂದ ವರ್ತುಲಾಕಾರ ಚಕ್ರದಂತೆ ಕೆಂಪಾದ ಅಗ್ನಿಯು ವರ್ತುಲಾಕಾರ ಚಕ್ರವು ತೋರುವದು. ಕೊಳ್ಳಿಯು ಭ್ರಮಣದಿಂದ ಚಕ್ರವು ಕಾಣುವದು. ಕೊಳ್ಳಿಯನ್ನು ತಿರುಗಿಸುವಾಗ ಚಕ್ರಾಕಾರ ಕಂಕಣವು ಕಾಣುವದು. ಕೊಳ್ಳಿಯನ್ನು ತಿರುಗಿಸದೆ ಸುಮ್ಮನೆ ಇರುವಾಗ ಆ ಚಕ್ರಾಕಾರವು ಕಾಣದೆ, ಭಾಸವೂ ನಾಶವಾಗುವದು. ಇದರಂತೆ ಸಂಸಾರವು ಒಮ್ಮೆ ಕಾಣುವದು, ಮತ್ತೊಂದು ಕ್ಷಣದಲ್ಲಿ ನಾಶವಾಗುವದು. ಕೊಳ್ಳಿಯನ್ನು ನಾವು ದೃಢವಾಗಿ ತಿರುಗಿಸುತ್ತ ಹೋದ ಹಾಗೆಲ್ಲ ಕೊಳ್ಳಿಯು ವರ್ತುಲಾಕಾರ ಕೆಂಪಾದ ಕಂಕಣವು ಕಾಣುವದು; ಆದರೆ ಭ್ರಮವು (ನಾವು ಕೊಳ್ಳಿಯನ್ನು ತಿರುಗಿಸುವ

ದನ್ನು ಬಿಟ್ಟರೆ) ನಿಲ್ಲಲು, ಆ ಅಗ್ನಿಯು ಕಂಕಣಾಕಾರವೂ ಇರಲಾರದು. ಎಲ್ಲಿಯ ವರೆಗೆ ನಮಗೆ ಭ್ರಾಂತಿಯಿರುವದೋ ಅಲ್ಲಿಯ ವರೆಗೆ ನಮಗೆ ಸಂಸಾರವು ಸತ್ಯ ವಾಗಿ ತೋರುವದು; ಆದರೆ ಅನಾಯಾಸವಾಗಿ ಭ್ರಮವು ಹೊರಟು ಹೋದ ಬಳಿಕ ಸಂಸಾರವನ್ನು ನೋಡಬೇಕೆಂದು ನಾವು ಹೋದರೂ ಅದು ಕಾಣುವ ದಿಲ್ಲ; ಅಥವಾ ಅದರ ಅಸ್ತಿತ್ವವೇ ಇರುವದಿಲ್ಲ. ನಾನೆಂದರೆ ದೇಹವು. (ನಾನೇ ದೇಹವು) ಇವರು ನನ್ನ ದೇಹಕ್ಕೆ ಸಂಬಂಧಿಸಿದ ಹೆಂಡಿರು-ಮಕ್ಕಳು, ಇದೇ ನಮ್ಮ ಭ್ರಾಂತಿಗೆ ಮುಖ್ಯವಾದ ಸೂತ್ರವು. ಈ ಭ್ರಮದ ಸೂತ್ರವನ್ನು ಛೇದಿ ಸದೆ, ಜನರು ನಾವು ಮುಕ್ತರೆಂಬ ಅಹಂಕಾರವನ್ನು ಮೋಹದಲ್ಲಿ ಮೆರೆಯಿಸು ತ್ತಿರುವರು. ಏವಂಚ:—ಸಂಸಾರವು ಮಾಯಾಮಯ (ಮಿಥ್ಯ) ವಾದದ್ದೆಂದು ನಿಶ್ಚಯವಾಗಿ ತಿಳಿದು, ಅಹಂಕಾರದಲ್ಲುದಿಸಿದ ಅತ್ಯಾದರವನ್ನು ತ್ಯಜಿಸಿ (ಅಹಂ ಕಾರ ತ್ಯಾಗಮಾಡಿ) ಮಾಯೆಯಿಂದ ಬಿಡುಗಡೆ ಹೊಂದುವ ಪ್ರಕಾರವನ್ನು ತಿಳ ಕೊಳ್ಳಬೇಕು. ಅದನ್ನೇ ನಾನು ನಿಮಗೆ ಹೇಳುವೆನು.

## ಭಗವದ್ಭಾವನೆಯಿಂದ ಸಂಸಾರ ಭ್ರಮದ ನಿರ್ಮೂಲನ.

ಹಿಂದೆ ಹೇಳಿದಂತೆ ಭಗವದ್ಭಜನದಲ್ಲಿ ನಾವು ಮಗ್ನರಾದರೆ ನಮ್ಮ ದೃಷ್ಟಿ ಯು ಸಹಜವಾಗಿಯೇ ನಿರ್ಮಲವಾಗುವದು. ಸಾಂಸಾರಿಕ ತ್ರಿಪುಟಗಳು (ಆಧ್ಯಾ ತ್ಮಿಕ, ಆಧಿದೈವಿಕ, ಆಧಿಭೌತಿಕ ಇವೇ ಮೊದಲಾದ ತ್ರಿಪುಟಿಗಳು) ಮಿಥ್ಯವಾಗಿ ರುವವೆಂಬ ದೃಢನಿಶ್ಚಯವು ನಮ್ಮ ಹೃದಯದಲ್ಲಿ ಆಗುವದು. ಆಗ ಸಾಂಸಾ ರಿಕ ತ್ರಿಪುಟಿಯನ್ನು ಬಿಟ್ಟು, ನಮ್ಮ ದೃಷ್ಟಿಯನ್ನು ಹೃದಯಸ್ಥನಾದ ಪರಮಾತ್ಮನ ಕಡೆಗೆ ತಿರುಗಿಸಲು, ನಮಗೆ ಆ ಹೃದಯಸ್ಥನಾದ ಪರಮಾತ್ಮನ ದರ್ಶನವು ಸತ್ಯ ವಾಗಿ ಆಗುವದು. ಸುವರ್ಣದಲ್ಲಿಯೇ ದೃಷ್ಟಿಯನ್ನಿಟ್ಟು ಅಥವಾ ಸುವರ್ಣ ದೃಷ್ಟಿಯಿಂದ ಅಲಂಕಾರಗಳನ್ನು ನೋಡಿದರೆ ಅಲಂಕಾರಗಳಲ್ಲಿ ಬಂಗಾರವು ಕಾಣುವದು. ಇದರಂತೆ ಹೃದಯಸ್ಥನಾದ ಪರಮಾತ್ಮನ ದರ್ಶನವಾದ ಬಳಿಕ ದೃಶ್ಯ, ದ್ರಷ್ಟಾ, ದರ್ಶನ ಎಂಬೀ ತ್ರಿಪುಟಿಯ ಭಾಗವನ್ನು ಮುರಿದು ಹಾಕಬೇಕು. ದೃಶ್ಯ, ದ್ರಷ್ಟಾ, ದರ್ಶನ ಎಂಬ ತ್ರಿಪುಟಿಯು ನಾಶವಾಗಲು, ಕೇವಲ ಪರಮಾತ್ಮನೇ ಉಳಿಯುವನು. ಹೀಗೆ ತ್ರಿಪುಟಿಯನ್ನು ಪರಮಾತ್ಮನಲ್ಲಿ ಯೇ ದೃಷ್ಟಿಯನ್ನಿಟ್ಟು ಮುರಿಯುವದೇ ಧಾರಣವು. ಅದೇ ಧ್ಯಾನವು. ಹೃದಯ ಸ್ಥನಾದ ಪರಮಾತ್ಮನನ್ನು ಈ ರೀತಿಯಿಂದ ನೋಡುವದರಿಂದಲೇ ಸಮಾಧಾನ ವಾಗುವದು. ಹೃದಯಸ್ಥನಾದ ಪರಮಾತ್ಮನ ದರ್ಶನವೇ ನಿಜಸುಖಾನುಭವವು.

ಈ ನಿಜಸುಖಾನುಭವವಾಗಲಿ, ಸಮಾಧಾನವಾಗಲಿ ನಮ್ಮಲ್ಲಿ ಬಂದು ಅದು ಸ್ಥಿರವಾಗಬೇಕಾದರೆ, ನಾವು ಸಕಲ ತೃಷ್ಣೆ (ಅತ್ಯಾಸೆ) ಯನ್ನೆಲ್ಲ ಬಿಟ್ಟುಬಿಡಬೇಕು. ವಾಣಿಯಿಂದ ಯಾವ ವಚನಗಳನ್ನಾದರೂ ಆಡಬಾರದು. ಯಾವಾಗಲೂ ಅಖಂಡ ಮೌನವನ್ನು ಧರಿಸಬೇಕು. ನಮ್ಮ ದೇಹದಿಂದ ಆಗುವ ಚೇಷ್ಟೆಗಳನ್ನು (ವ್ಯವಹಾರ) ನಿಗ್ರಹ ಮಾಡಬೇಕು. ವೇದ-ಶಾಸ್ತ್ರಗಳ ವ್ಯುತ್ಪತ್ತಿಯ ಮದವನ್ನು ಬಿಡಬೇಕು; ವಾಗ್ವಾದ ಬಡಬಡಿಕೆಗಳನ್ನು ತ್ಯಜಿಸಬೇಕು; ಸರ್ವತ್ರದಲ್ಲಿ ಭಗವದ್ಭಾವನೆಯನ್ನು ದೃಢವಾಗಿ ಇಟ್ಟುಕೊಂಡು ನಡೆಯಬೇಕು. ಇದರಿಂದ ಆಶೆಯ ಮೂಲವು ಪುರಾ ನಿರ್ಮೂಲವಾಗುವದು. ದೇಹ, ವಾಣಿ, ಮನಸ್ಸುಗಳನ್ನು ನಮ್ಮ ಸ್ವಾಧೀನದಲ್ಲಿಟ್ಟುಕೊಳ್ಳಬೇಕು. ಸ್ವಸ್ವರೂಪಾನುಸಂಧಾನವು ಒಂದು ಕ್ಷಣವಾದರೂ ನಿಲ್ಲದಂತೆ (ತಪ್ಪದಂತೆ) ಜಾಗರೂಕವಾಗಿರಬೇಕು. ನಿಜರೂಪ (ಆತ್ಮಸ್ವರೂಪ) ದಲ್ಲಿ ಯಾವಾಗಲೂ ಲಕ್ಷ್ಯವು ತಪ್ಪದಂತೆ ಸಾವಧಾನವಾಗಿರಬೇಕು. ಆತ್ಮಸ್ವರೂಪ ಸುಖವು ಒಮ್ಮೆ ದೊರೆಯಲು, ದೇಹದ ದೇಹತ್ವದ ಸ್ಮರಣವಾದರೂ ಆಗಬಾರದು. ದೇಹಬುದ್ಧಿಯು ಹೊರಟುಹೋಗುವದು; ಅಹಂಕಾರದೊಡನೆ ಮನಸ್ಸೂ ಕೂಡ ಇಲ್ಲದಂತಾಗುವದು. ಸ್ವಾನಂದವು ಸಾಧಕನಲ್ಲಿ ಪೂರ್ಣವಾಗಿ ತುಂಬಿಕೊಳ್ಳುವದು. ಸ್ವಸ್ವರೂಪದ ನಿಜಸುಖಾನುಭವದ ಪ್ರಾಪ್ತಿಯು ಆದಾಗ ಅವನಿಗೆ ಹಿಂದೆ ಮುಂದೆ ಮತ್ತೊಬ್ಬರೂ ಕಾಣುವದಿಲ್ಲ. ಪರಬ್ರಹ್ಮವಸ್ತುವೊಂದೇ ಅಲ್ಲಿ ಇರುವಾಗ ಅವನಿಗೆ ಅನ್ಯ ವಸ್ತುವು ಹ್ಯಾಗೆ ಕಾಣಬೇಕು? ಅನ್ಯವಸ್ತುವೇ ಅವನಿಗೆ ಕಾಣಲಾರದು. ಪರಬ್ರಹ್ಮವೊಂದೇ ವ್ಯಾಪಕವಾಗಿ ಅವನಿಗೆ ಎಲ್ಲಿ ನೋಡಿದಲ್ಲಿ ಅದೇ ಕಾಣುವದು. ದೇವ-ಭಕ್ತ ಎಂಬ ಭೇದಭಾವವೂ ಕೂಡ ಉಳಿಯಲಾರದು. ದೇವತ್ವ-ಭಕ್ತತ್ವಗಳ ಐಕ್ಯವು ಆಗಲು, ದ್ವೈತಕಲ್ಪನೆಯಾದರೂ ಬರಲಾರದು. ಆತ್ಮಸುಖದಿಂದ ಪೂರ್ಣನಾಗಿ ಅವನು ನಿಜಸುಖರೂಪನೇ ಆಗುವನು. ನಾನು ಅದ್ವಿತೀಯನಾದ ಪರಬ್ರಹ್ಮ ವಸ್ತುವು. ನಾನೊಬ್ಬನೇ ಸುಖರೂಪನು. ದ್ವೈತಕ್ಕೆ (ಭೇದಕ್ಕೆ) ಆಸ್ಪದವಿಲ್ಲ ಎಂಬ ತಿಳುವಳಿಕೆಯಿಂದ ಆತ್ಮಾನುಭವವು ಅವನಿಗೆ ಬರುವದು. ಇಂಥ ಆತ್ಮಾನುಭವದಿಂದ ಸಾಧಕನಾದ ಭಕ್ತನು ಸದಾ ಸುಖರೂಪವಾಗಿರುವನು. ನನ್ನ ಭಕ್ತರಿಗೆ ಮಾತ್ರ ಆತ್ಮಾನುಭವ ಸುಖವು ಆಗುವದು.

## ಜೀವನ್ಮುಕ್ತಸ್ಥಿತಿಯ ವರ್ಣನ.

ಮುನಿಗಳೇ, ನಿಮಗೆ ಒಂದವೇಳೆ, "ಸ್ವಾತ್ಮಾನುಭವಸುಖದಲ್ಲಿ ಮಗ್ನ

ನಾದ ನನ್ನ ಭಕ್ತನು, ಹಗಲುರಾತ್ರಿ ಕಾಷ್ಠದಂತೆ ಒಂದು ಕಡೆಗೆ ಬಿದ್ದಿರುವ ನೆಂದು ಸಂಶಯವುಂಟಾದೀತು; ಆದರೆ ಅವನ ಸ್ಥಿತಿಯು ಕಾಷ್ಠದಂತೆ ಇರಲಾರದು. ಅವನು ದೇಹದಿಂದ ಇದ್ದಾಗ್ಯೂ ಅವನು ದೇಹದಿಂದಾಗುವ ಎಲ್ಲ ಕರ್ಮಗಳನ್ನು ನಿರ್ಲೇಪಕವಾಗಿ, ನಿಷ್ಕಾಮನಾಗಿ ಮಾಡುವನು. ಆತ್ಮಾನುಭವಸುಖದಲ್ಲಿರುವ ನನ್ನ (ಭಗವಂತನ) ಭಕ್ತನಿಗೆ ಯಾವ ಕಾಮನೆಯಾಗಲಿ, ಇರುವದಿಲ್ಲ. ಇಂಥ ಜ್ಞಾನಿಯು ಪ್ರಾರಬ್ಧದ ಯೋಗದಿಂದ ಆಹಾರ-ನಿದ್ರಾದಿ ಅವಶ್ಯಕ ನಿತ್ಯ ಕರ್ಮಗಳನ್ನಾಗಲಿ, ಪ್ರಾರಬ್ಧ ಯೋಗದಿಂದ ಅವನ ದೇಹದಿಂದ ಸಹಜವಾಗಿ ಸಂಭವಿಸುವ ಕರ್ಮಗಳನ್ನಾಗಲಿ ಮಾಡುವಾಗ, ದೇಹಬುದ್ಧಿಯು ಅವನನ್ನು ಸರ್ವಥಾ ಮುಟ್ಟಲಾರದು. ಅವನಿಗೆ ಆಗ ಅಹಂಕಾರವು ಸ್ವಲ್ಪಾದರೂ ಬರದು. ಕುಂಬಾರನು ತನ್ನ ಚಕ್ರವನ್ನು ಕೋಲಿನಿಂದ ತಿರುಗಿಸಿ ಅದಕ್ಕೆ ಒಮ್ಮೆ ಗತಿಕೊಟ್ಟ ಕೂಡಲೆ ಅದು ಒಂದೇಸವನೇ ತಿರುಗುತ್ತ ಹೋಗುವದು. ಅವನು ನಡುವೆ ಆ ಕೋಲನ್ನು ಕಡೆಗೆ ತಕ್ಕೊಂಡರೂ ಕೂಡ, ಮೊದಲಿನ ಗತಿಯ ಜೋರಿನಿಂದ ಆ ಚಕ್ರವು ತಿರುಗುತ್ತಲೇ ಇರುವದು. ಇದರಂತೆ ಪ್ರಾರಬ್ಧದ ಸಂಸ್ಕಾರದಿಂದ, ಕರ್ಮಾನುಸಾರವಾಗಿ ಆತ್ಮಜ್ಞಾನಿಯ ದೇಹವು ವರ್ತಿಸುವದು. ಕುಂಬಾರನ ಚಕ್ರದ ಮೇಲೆ ಕುಳಿತಿರುವ ನೊಣವು ಸರಿದಾಡದೆ, ಆ ಚಕ್ರದ ಸಂಗಡಲೇ ಅದು ತಿರುಗುವಂತೆ ತಿರುಗುವದು. ಆ ಚಕ್ರವು ಕೋಟಿಸಾರೆ ತಿರುಗಿದರೆ, ಆ ನೊಣವಾದರೂ ಕೋಟಿಸಾರೆ ತಿರುಗಿತೆಂದು ತಿಳಿಯುವರು; ಅದಕ್ಕೆ ಕೋಟಿಸುತ್ತುಗಳು ಆದವೆಂದು ಜನರ ವಾಡಿಕೆಯಾಗಿ ಅನ್ನುವರು. ವಸ್ತುತಃ ಆ ನೊಣವು ತಾನೇ ಕೋಟಿಸುತ್ತುಗಳನ್ನು ತಿರುಗದೆ ಅದು ಸರಿದಾಡದೆ ಹಾಗೇ ಆ ಚಕ್ರದ ಮೇಲೆ ಕುಳಿತಿರುವದು; ಆದರೆ ಚಕ್ರವು ಮಾತ್ರ ಕುಂಬಾರನು ಕೊಟ್ಟ ಗತಿಯಿಂದ ಕೋಟಿ ಸುತ್ತುಗಳನ್ನು ತಿರುಗುವದು. ಇದರಂತೆ ದೇಹದಿಂದ ಇರುವ (ಮುಕ್ತನಾದ) ಜ್ಞಾನಿಯು ಪ್ರಾರಬ್ಧ ಯೋಗದಿಂದ ಅವನ ದೇಹದಿಂದ ಕರ್ಮಗಳು ಎಷ್ಟೋ ಆಗುವವು; ಆದರೆ ಅವನಲ್ಲಿ ದೇಹಬುದ್ಧಿಯಿಲ್ಲದಿರುವದರಿಂದಲೂ, ನಿಷ್ಕಾಮನಾಗಿರುವದರಿಂದಲೂ ಅವನಿಗೆ ಆ ಕರ್ಮಗಳ ಕರ್ತೃತ್ವವು ಸಂಭವಿಸುವದಿಲ್ಲ. ಜನರಿಗೆ ಮಾತ್ರ ಅವನ ದೇಹದಿಂದ ಕರ್ಮಾನುಸಾರವಾಗಿ ಆಗುವ ಕರ್ಮಗಳನ್ನು ನೋಡಿ ಅವನೇ ಕರ್ಮಗಳನ್ನು ಮಾಡುವವನೆಂದು ತೋರುವದು. ಈ ಪ್ರಕಾರ ಆತ್ಮಜ್ಞಾನಿಯ ದೇಹದಿಂದ ಕರ್ಮಗಳು ಕರ್ಮಾನುಸಾರವಾಗಿ ಆಗು

ತ್ತಿರಲು, ಅಥವಾ ಪ್ರಾರಬ್ಧ ಯೋಗದಿಂದ ಅವನು ದೇಹದಿಂದ ನಿತ್ಯ ಕರ್ಮ ಗಳನ್ನು ಮಾಡುತ್ತಿರಲು, ಅವನು (ಆತ್ಮಜ್ಞಾನಿಯು) ತಾನೇ ಆ ಕರ್ಮಗಳ ಕರ್ತೃವೆಂಬ ಅಹಂಕಾರವನ್ನು ತಾಳುವದಿಲ್ಲ. ಗಿಡಗಳಿಂದ ನೆಲದಮೇಲೆ ಉದುರಿ ಬಿದ್ದ ಎಲೆಗಳಲ್ಲಿ ಚಪಲತೆ ಹುಟ್ಟಬೇಕಾದರೆ, ಅಂದರೆ ಅವು ಅತ್ತಿಂದಿತ್ತ ಹಾರಾಡ ಬೇಕಾದರೆ ಗಾಳಿಯ ಸ್ವಾಭಾವಿಕ ಸಂಸರ್ಗದಿಂದಲೇ ಆ ಚಪಲತೆಯು ಹುಟ್ಟಿ ತೆಂದು ಹೇಳಬೇಕಾಗುವದು. ಗಾಳಿಯು ಬಿಸಿಲು, ಅದರ ಯೋಗದಿಂದ ಉದುರಿ ಬಿದ್ದ ಎಲೆಗಳೂ ಸರಿದಾಡುವವು. ಹಾರಾಡುವವು. ಗಾಳಿಯ ಸಂಪರ್ಕವಿಲ್ಲ ದಿದ್ದರೆ ಎಲೆಗಳು ತಾವೇ ಹಾರಾಡಲಾರವು. ಮತ್ತು ಗಾಳಿಯಲ್ಲಾದರೂ ಸ್ವಾಭಾವಿಕವಾಗಿ ಚಂಚಲತ್ವವು ಇರುವದೆಂಬದು ಅದೇ ಗಾಳಿಯೋಗದಿಂದ ಅಂದರೆ ಗಾಳಿಯ ಸಂಪರ್ಕದಿಂದ ಉದುರಿದ ಎಲೆಗಳು ಹಾರಾಡಿದ ಬಳಿಕ ಗೊತ್ತಾಗುವದು.

ಇದರಂತೆ ಜ್ಞಾನಿಯ ದೇಹದಿಂದ ಕಾರ್ಯಗಳು ಕರ್ಮಾನುಸಾರವಾಗಿ ನಡೆಯುವಾಗ, ಅವನು ಆ ಕರ್ಮಗಳನ್ನು ಮಾಡುವಂತೆ ತೋರುವದು. ವಸ್ತುತಃ ಆತ್ಮಜ್ಞಾನಿಯು ತಾನೇ ಆಸಕ್ತಬುದ್ಧಿಯಿಂದಲೂ, ಅಹಂಕಾರದಿಂದಲೂ ಕರ್ಮಗಳನ್ನು ತನ್ನ ದೇಹದಿಂದ ಮಾಡುವದಿಲ್ಲ. ಪುರುಷನ ಸಂಗಡವೇ ಅವನ ನೆರಳು ಇರುವದು. ಅವನನ್ನು ಬಿಟ್ಟು ಅದು ಇರಲಾರದು. ಆದರೆ ಅವನು ತನ್ನ ಛಾಯೆಯಲ್ಲಿ ತಾನೇ ಕೂಡ್ರಲಾರನು. ಇದರಂತೆ ಆತ್ಮಜ್ಞಾನಿಗೆ ದೇಹವು ಇರುವದು ಕಾಣುತ್ತಿದ್ದರೂ, ಅವನು ಆ ದೇಹದ ದೋಷದಿಂದ ಅವನು ದೋಷಿಯಾಗುವದಿಲ್ಲ. ತನ್ನ ನೆರಳಿನಲ್ಲಿ ತಾನೇ ಕೂಡ್ರಲಿಕ್ಕೆ ಹೋ-ಗಲು, ಆ ನೆರಳೇ ಇಲ್ಲದಂತಾಗುವದು. ಅಥವಾ ಓಡಿ ಹೋಗುವದು. ಇದ ರಂತೆ ನಮ್ಮ ದೇಹದಿಂದ ಆತ್ಮಜ್ಞಾನಿಯಾದ ಭಕ್ತರಲ್ಲಿ ಮಾಯೆಯು ಇರುವದೇ ನೆಂಬದನ್ನು ನೋಡಲುದ್ಯುಕ್ತರಾದರೆ, ದೇಹವು ಸ್ವಾಭಾವಿಕವಾಗಿ ಮಿಥ್ಯವಾಗಿ ರುವದರಿಂದ ನಮ್ಮ ದೇಹವಾದರೂ ಓಡಿ ಹೋಗುವದು. ಮುತ್ತಿನ ಸರವು ಭ್ರಮದಿಂದ ನಮ್ಮ ಕಣ್ಣುಗಳಿಗೆ ಸರ್ಪದ ಆಕಾರವಾಗಿ ಕಾಣುವದು. ಆದರೆ ನಿಜವಾದ ವಸ್ತುಜ್ಞಾನದಿಂದ ನಮ್ಮ ಭ್ರಾಂತಿಯು ನಿರಸನವಾದ ಬಳಿಕ ಅದೇ ಮುತ್ತಿನ ಮಾಲೆಯನ್ನು ನಾವು ಕೊರಳಲ್ಲಿ ಹಾಕಿಕೊಂಡರೆ, ಮೊದಲು ಭ್ರಾಂತಿಯಿಂದ ಬಂದ ಸರ್ಪಭಯವು ನಮ್ಮಲ್ಲಿ ಹುಟ್ಟಲಾರದು. ಅದರಂತೆ ಜಗ ತ್ತಿನ ಜನರು ಇವನು ಅಧಮಯೋನಿಯವನು, ಇವನು ಉತ್ತಮ ಯೋನಿ

ಯವನು, ಇವನು ವಂದ್ಯನು, ಇವನು ನಿಂದ್ಯನು. ಎಂದು ಅಂದರೂ ಅಥವಾ ಜಗತ್ತಿನಲ್ಲಿ ಅಧಮೋತ್ತಮ ವಸ್ತುಗಳೆಷ್ಟಿರುವವೋ ನಿಂದ್ಯ-ವಂದ್ಯಗಳು ಎಷ್ಟಿರುವವೋ ಅವೆಲ್ಲ ನಾನೇ ಇರುವೆನೆಂದು ಜ್ಞಾನಿಯು ಅಂದರೂ, ದೇಹವು ಮಿಥ್ಯವಾಗಿರುವದೆಂಬ ನಿಶ್ಚಯವು ಅವನಲ್ಲಿರುವದರಿಂದ ಅವನು ಮನಸ್ಸಿನಲ್ಲಿ ಯಾವ ಸಂಶಯವನ್ನು ತರುವದಿಲ್ಲ ಆತ್ಮಜ್ಞಾನಿಗೆ ದೇಹವು ಮಿಥ್ಯವಾಗಿ ತೋರುವದೆಂದು ತಿಳಿದು ತಾನು ಪ್ರಾರಬ್ಧಯೋಗದಿಂದ ಅಥವಾ ಪ್ರಕೃತಿಯಿಂದ ಪ್ರಾಪ್ತವಾದ ಕರ್ಮಗಳನ್ನು ಮಾಡುತ್ತಿದ್ದರೂ, ಅವನಿಗೆ ದೇಹದ ದೇಹತ್ವದ ಸ್ಫುರಣವಾಗುವದಿಲ್ಲ. ಹೀಗಿರುವದರಿಂದ, ಜ್ಞಾನಿಯು ದೇಹವನ್ನು ಕಡಿದರೂ, ಅಥವಾ ತೋಳ, ಹುಲಿಗಳು ಅದನ್ನು ಹರಿದು ಛಿನ್ನ ಭಿನ್ನ ಮಾಡಿದರೂ, ಅಥವಾ ಅದು ಅಗ್ನಿಯಲ್ಲಿ ಸುಡುತ್ತಿದ್ದರೂ, ಅದು ಎತ್ತರ ಪ್ರದೇಶದಿಂದ ಧಡ ಧಡ ಬಿದ್ದರೂ ಅವನಿಗೆ ದೇಹಾಹಂಕಾರದ ಸ್ಫುರಣವೇ ಆಗುವದಿಲ್ಲ. ಯಾವನೊಬ್ಬ ಪುರುಷ ದೇಹದ ಛಾಯೆಯನ್ನು ಶೂಲಕ್ಕೆ ಏರಿಸಿದ್ದನ್ನು ಅವನು ನೋಡಿದರೆ, ಆ ನೆರಳಿನ ಸಂಕಟದ ವಿಷಯವಾಗಿ ಅವನು ತಳಮಳಿಸುವದಿಲ್ಲ. ಇದರಂತೆ ಆತ್ಮಜ್ಞಾನಿಯ ಶರೀರವು ಸುಟ್ಟು ಹೋದರೂ, (ಆತ್ಮಜ್ಞಾನಿಗೆ) ಅವನಿಗೆ ಆತ್ಮಬೋಧವು ಆಗಿರುವದರಿಂದ, ಅವನಲ್ಲಿ ಯಾವ ತರಹದ ದುಃಖವೂ ಆಗುವದಿಲ್ಲ. ಮುನಿಗಳೇ, ನೀವು ಇಲ್ಲಿ "ಆತ್ಮಜ್ಞಾನಿಯಾದರೂ ದೇಹದ ಸಂಗದಲ್ಲಿ ಇರುತ್ತಿರುವನು. ಅಂದಬಳಿಕ ಅವನಿಗೆ ದೇಹಾಹಂಕಾರವು ಬಾಧಿಸುವದು ಸಹಜವು; ಆದರೆ ಅವನಿಗೆ ದೇಹಸಂಗದ ಬಾಧೆಯೇ ಆಗುವದಿಲ್ಲೆಂದು ಹೇಳುವದು ಆಶ್ಚರ್ಯಕರವಾಗಿದೆ. ಉಪ್ಪು ತನ್ನಲ್ಲಿಯ ಮುಖ್ಯ ಗುಣವಾದ ಸೌಳುತನವನ್ನು ಬಿಟ್ಟು ಬೇರೆ ಹ್ಯಾಗೆ ಇರುವದು? ಇಂಗು ತನ್ನ ಸ್ವಾಭಾವಿಕವೂ, ಉಗ್ರವೂ ಆದ ಹಾಗು ಮನಸ್ಸಿಗೆ ಹೇಸಿಗೆ ಬರುವ ಹೊಲಸು ನಾತವನ್ನು ಬಿಟ್ಟು, ಸುಗಂಧ(ತನ)ದಲ್ಲಿ ಹ್ಯಾಗೆ ಇರುವದು ಶಕ್ಯವು? ಬಾಳೆಯು ತನ್ನ(ದೇಹದ)ಲ್ಲಿರುವ ನೀರನ್ನು ನಿಃಶೇಷವಾಗಿ ಬಿಟ್ಟುಬಿಟ್ಟರೆ, ಅದು ಬಾಳೆ ಹ್ಯಾಗೆ ಆಗಬಲ್ಲದು? ನಾನು ರಣಾಂಗಣಕ್ಕೆ ಹೋಗಿ ಯುದ್ಧಮಾಡುವದಿಲ್ಲೆಂದು ವೀರನು ರಣಾಂಗಣಕ್ಕೆ ಹೋದರೂ ಅವನಿಗೆ ಗಾಯವಾಗದೆ ಎಂದಿಗೂ ಇರಲಾರದು. ಅವನ ತಲೆಗೆ ಭಟರ ಶಸ್ತ್ರಾಸ್ತ್ರಗಳ ಪ್ರಹಾರಗಳು ಬಿದ್ದೇ ಬೀಳುವವು. ಇದರಂತೆ ಆತ್ಮಜ್ಞಾನಿಯು ದೇಹಸಂಗದಲ್ಲಿ ಇರುತ್ತಿದ್ದರೂ, ದೇಹದಿಂದ ಅವನು ಕರ್ಮಗಳನ್ನು ಮಾಡುತ್ತಿದ್ದರೂ, ದೇಹಾಹಂಕಾರವು ಅವನನ್ನು ಎಂದಿಗೂ ಬಿಡಲಾರದು." ಎಂದು

ಸಂಶಯುವನ್ನು ತಕ್ಕೊಂಡರೆ, ಈ ವಿಷಯುದಲ್ಲಿ ನಾನು ಹೇಳುವದನ್ನು ಸಾವ ಧಾನರಾಗಿ ಕೇಳಿರಿ.

ಆತ್ಮಜ್ಞಾನಿಗೆ ದೇಹದ ಭಾನವು ಬಾಧಿಸುತ್ತಿದೆಯೆಂದು ಗೃಹೀತ ಮಾಡಿದರೂ ಅದರಿಂದ ಅವನಲ್ಲಿ ಸ್ಫುರಣವಾಗುವ ಅಭಿಮಾನವು ಹುರಿದ ಬೀಜದಂತೆ ಇರುವದು. ಧಾನ್ಯದ ಹುರಿದ ಬೀಜಗಳಿಂದ (ಕಾಳುಗಳಿಂದ) ಒಂದುವೇಳೆ ಹಸಿವೆಯುು ಹೋಗಬಹುದು; ಆದರೆ ಹುರಿದ ಕಾಳನ್ನು ಭೂಮಿಯಲ್ಲಿ ಬಿತ್ತಿದರೆ, ಅದರಲ್ಲಿ ಅಂಕುರವು ಹ್ಯಾಗೆ ಒಡೆಯುುವದು? ಚಿತ್ರದಲ್ಲಿ ಹುಲಿಯುು ಕಂಡರೂ ಮನುಷ್ಯನಿಗೆ ಆದರಿಂದ ಬಾಧಕವಾಗುವದಿಲ್ಲ ಅದರಂತೆ ಆತ್ಮಜ್ಞಾನಿಗೆ ಹುರಿದ ಬೀಜದಂತೆ ಇರುವ ಅಭಿಮಾನ ಶೇಷದಿಂದ ಯಾವ ಬಾಧೆಯೂ ಇರುವದು ಸಂಭವವಿಲ್ಲ. ಚೈತನ್ಯಘನನಾದ ಪರಬ್ರಹ್ಮ ವಸ್ತುವು ಒಳಗೂ ಹೊರಗೂ ವ್ಯಾಪಕವಾಗಿರುವದೆಂದು ಮನಸ್ಸಿನಲ್ಲಿ ದೃಢವಾಗಿ ಬಿಂಬಿಸಿದಾಗ ಅಂದರೆ ತಾನು ಅಖಂಡಾಕಾರವಾದಾಗ ಆತ್ಮಸ್ವರೂಪದಲ್ಲಿ ವೃತ್ತಿಯುು ಲೀನವಾಗುವದು. ಆಗ ದೇಹದ ಭಾನವೇ ಇರುವದಿಲ್ಲೆಂಬ ಭಾನವೂ ಉಳಿಯುುವದಿಲ್ಲ. ಹೀಗೆ ದೇಹದ ಮಿಥ್ಯಾತ್ವ ಭಾನವೂ ಹೋಗಲು, ಆತ್ಮಜ್ಞಾನಿಯ ಸ್ಥಿತಿಯುು ಹ್ಯಾಗೆ ಆಗುವದೆಂಬ ಲಕ್ಷಣವನ್ನು ಹೇಳುವೆನು ಕೇಳಿರಿ. ಸರ್ವ ಕರ್ಮಗಳನ್ನು ಮಾಡುತ್ತಿರುವಾಗಲೂ ದೇಹದ ದೇಹತ್ವವು ಸ್ಫುರಣವಾಗುವದಿಲ್ಲ. ಇದೇ ಸಮಾಧಿಯ ಮುುಖ್ಯ ಲಕ್ಷಣವು.

## ಜೀವನ್ಮುಕ್ತ ಸ್ಥಿತಿಯ ವರ್ಣನ.

ಯಾವ ದೇಹದಿಂದ ಆತ್ಮಜ್ಞಾನಿಗೆ ನನ್ನ (ಭಗವಂತನ) ಭಜನೆಯಿಂದ ನನ್ನ ಶುದ್ಧವಾದ (ಭಗವತ್) ಸ್ವರೂಪ ಪ್ರಾಪ್ತಿಯಾಗುವದೋ, ಅದೇ ದೇಹವನ್ನು ಅವನು ಮರೆತು ಬಿಟ್ಟುಬಿಡುವನು. ಅವನಿಗೆ ಜಗತ್ತಿನಲ್ಲಿ 'ನಾನು, ನನ್ನ'ದೆಂಬದು ಕಾಣುವದೇ ಇಲ್ಲ; ಯಾವ ಬಾಡಿಗೆಯ ಕುದುರೆಯುು ತಮ್ಮನ್ನು ತಮ್ಮ ಮನೆಗೆ ತಂದು ಬಿಟ್ಟಿತೋ ಅದು ತಮ್ಮ ಮನೆಯ ಹತ್ತರ ಅದೆಯೋ, ಅಥವಾ ಎರಡನೆಯ ಕಡೆಗೆ ಹೋಗಿರುವದೋ ಎಂಬದನ್ನು ಯಾರಾದರೂ ನೆನಪಿನಿಂದ ನೋಡುವದಿಲ್ಲ. ಇದರಂತೆ ಜೀವನ್ಮುಕ್ತನಾಗಿ ಜ್ಞಾನಿಯುು ತನ್ನ ದೇಹದ ಬಗ್ಗೆ ಲಕ್ಷ ಕೊಡುವನು. ತನ್ನ ಪತಿಯನ್ನು ಕಾಣುವದಕ್ಕಾಗಿ, ಯಾವಳೊಬ್ಬ ಪುರಂಧ್ರಿಯುು ತಾನೊಬ್ಬಳೇ ಬರಲಾರದೆ ತನ್ನ ಸಂಗಡ ವಿಶ್ವಾಸಕ್ಕೆ ಪಾತ್ರನಾದ ಒಬ್ಬ ಸೇವಕನನ್ನು ತರುವಳು; ಆದರೆ ಆ ಸತಿಯುು ಅಂತಃಪುರದಲ್ಲಿ ಪತಿಯ ಸಂಗಡ ಮಲಗಿಕೊಳ್ಳಲು, ಅಥವಾ ವಿನೋದದಿಂದ ಮಾತಾಡುತ್ತ ಕುಳಿತುಕೊಳ್ಳಲು, ಅವಳು

ತನ್ನ ಸಂಗಡ ಬಂದ ಆ ಸೇವಕನನ್ನು ಮರೆತು ಬಿಡುವಳು; ಅಥವಾ ದೈವ ಯೋಗದಿಂದ ಯಾವನೊಬ್ಬ ಸಂತನಿಗೆ ಪಲ್ಲಕ್ಕಿಯು ಪದವಿ ಬಂದು, ಅವನು ಅದ ರಲ್ಲಿ (ಪಲ್ಲಕ್ಕಿಯಲ್ಲಿ) ಕೂಡ್ರಲು, ಅವನಿಗೆ ತಾನು ಹಿಂದೆ ದಾರಿದ್ರ್ಯದಲ್ಲಿ ಹಾಕಿ ಕೊಂಡ ಹರಕು ವೊಜ್ಜೆಗಳು ಎಲ್ಲಿಯಾದರೂ ಹೋದವೋ ಅಥವಾ ಅವು ಅವೆ ಯೋ ಎಂಬದರ ಸ್ಮರಣೆಯೇ ಆಗುವದಿಲ್ಲ. ಆ ಸಂತನು ತನಗೆ ಈಗ ಪ್ರಾಪ್ತ ವಾದ ಶ್ರೀಮಂತಿಕೆಯನ್ನು ನೋಡಿ ಹರ್ಷಪಡುತ್ತಿರುವನು; ಅಥವಾ ಎಷ್ಟೋ ದಿವಸಗಳನಂತರ ಪತ್ನಿಯು ತನ್ನ ಗಂಡನೊಡನೆ, ತನ್ನ ಹಾಸಿಗೆಯ ಮೇಲೆ ಕೂಡಿ ಮಲಗಿಕೊಳ್ಳಲು, ಆಗ ಅವಳು ನಾಚಿಕೆಯನ್ನು ಪೂರಾ ಮರೆತುಬಿಡು ವಳು. ಹೀಗೆ ಆತ್ಮಜ್ಞಾನಿಗೆ ಜೀವನ್ಮುಕ್ತಸ್ಥಿತಿಯು ಪ್ರಾಪ್ತವಾಗಲು, ಅವನು ದೇಹವನ್ನು ಮರೆತುಬಿಡುವನು. ಅವನ ದೇಹದ ಸ್ಥಿತಿಯು ಇದರಂತೆ ಆಗುವದು.

ಮೇಲಿನ ಉದಾಹರಣೆಯಲ್ಲಿ ಹೇಳಿದಂತೆ ದಂಪತಿಗಳು ಏಕಾಂತದಲ್ಲಿ ಹಾಸಿಗೆಯ ಮೇಲೆ ಕೂಡಿ ಪರಸ್ಪರ ದರ್ಶನಸುಖವನ್ನು ಹೊಂದುತ್ತಿರುವಾಗ ಪತ್ನಿಗಾಗಲಿ, ಪತಿಗಾಗಲಿ ಎರಡನೆಯದವರು ಕಂಡರೆ ನಾಚಿಕೆಯು ಹುಟ್ಟು ವದು. ಅವರಿಗೆ ಅನ್ಯರಾರೂ ಕಾಣುವದೇ ಇಲ್ಲ. ಅವರು ಪರಸ್ಪರ ದರ್ಶನ ಸುಖದಲ್ಲಿಯೇ ಮಗ್ನರಾಗಿರುವರು. ಇದರಂತೆ ಆತ್ಮಜ್ಞಾನಿಗೆ ದ್ವೈತದೃಷ್ಟಿಯೇ ಇರುವದಿಲ್ಲ. ಭಗವತ್‌ಸ್ವರೂಪದಲ್ಲಿ ಅವನು ಐಕ್ಯಹೊಂದಿ ತುಷ್ಟನಾಗಿರುವದ ರಿಂದ ಅವನಿಗೆ ದೇಹದಲ್ಲಿ ದೃಷ್ಟಿಯೇ ಇರುವದಿಲ್ಲ. ಈ ಪ್ರಕಾರ ಸಾಧಕನು ಸ್ವಾನಂದಪೂರ್ಣವಾದ ಭಗವತ್‌ಸ್ವರೂಪ ಸ್ಥಿತಿಯನ್ನು ಹೊಂದಲು, ಆತ್ಮಾ ನಂದ ಸುಖದಿಂದ ಅವನು ಪೂರ್ಣವಾಗಿ ಸುಖರೂಪನಾಗಿರುವನು. ಆಗ ಆತ್ಮಾನಂದ ಸ್ಥಿತಿಯಲ್ಲಿ ಅವನು ತನ್ನ ದೇಹವನ್ನು ಸಹ ಮರೆತುಬಿಡುವನು. ಈ ಸ್ವಾನಂದ ಪೂರ್ಣಸ್ವರೂಪ ಸುಖವನ್ನು ಹೊಂದಿದ ಆತ್ಮಜ್ಞಾನಿಗೆ ತನ್ನ ಈ ದೇಹವು ಕುಳಿತಿರುವದೋ ಅಥವಾ ನಿಂತಿರುವದೋ, ಅದು ನಡೆ ಯುತ್ತಿರುವದೋ ಅಥವಾ ಚಲನವಿಲ್ಲದೆ ನಿಂತಿರುವದೋ, ಅದು ಮಲಗಿರು ವದೋ ಅಥವಾ ಎಚ್ಚತ್ತಿರುವದೋ, ಅದಕ್ಕೆ ಅನ್ನದಿಂದ ತೃಪ್ತಿಯಾಗಿರುವದೋ ಅಥವಾ ಅದಕ್ಕೆ ಹಸಿವೆಯಾಗಿರುವದೋ, ಅದು ಚಳಿಯಿಂದ ನಡಗುವದೋ ಅಥವಾ ಬಿಸಿಲಿನಿಂದ ತಾಪಪಡುವದೋ, ಅದು ನೀರು ಕುಡಿದಿರುವದೋ ಅಥವಾ ಅದು ನೀರಡಿಸಿರುವದೋ, ಅದು ನಿಂತಿರುವದೋ ಅಥವಾ ಓಡಾಡು

ವ್ವನೋ, ಅದು ಇಲ್ಲಿ ಅದೆಯೋ ಅಥವಾ ಅಲ್ಲಿ ಅದೆಯೋ, ಅದು ಮೂಕವಾಗಿ ರುವದೋ ಅಥವಾ ಮಾತಾಡುವದೋ, ಅದು ಇತ್ತೋ ಅಥವಾ ಇಲ್ಲೋ, ಅದು ಮಡಿಯಿಂದ ಇರುವದೋ ಅಥವಾ ಮೈಲಿಗೆಯಿಂದ ಇರುವದೋ, ಅದು ಸ್ವಚ್ಛವಾಗಿರುವದೋ ಅಥವಾ ಅದು ಮಲಿನವಾಗಿರುವದೋ, ಅದು ಕಣ್ಣಿನಿಂದ ನೋಡುವದೋ ಅಥವಾ ಕುರಡವಾಗಿದೆಯೋ, ಅದು ಕುಂಟವಾಗಿರುವದೋ ಅಥವಾ ಅದರ ಇಂದ್ರಿಯಗಳು ಬಲವಾಗಿಯೂ ಯಥಾಸ್ಥಿತಿಯಾಗಿಯೂ ಇರುವವೋ, ಅದು ಬಂದಿತೋ ಅಥವಾ ಹೋಯಿತೋ, ಅದು ಸತ್ತಿತೋ ಅಥವಾ ತಟಸ್ಥವಾಗಿರುವದೋ, ಅದು ಚಿಕ್ಕದಾದದ್ದೋ ಅಥವಾ ಪ್ರೌಢವೋ, ಅದು ಬಲವುಳ್ಳದ್ದೋ ಅಥವಾ ಸೊರಗಿರುವದೋ, ಅದು ಹಗುರಾಗಿರುವದೋ ಅಥವಾ ಜಡವಾಗಿರುವದೋ, ಅದು ಪಲ್ಲಂಗದ ಮೇಲಿರುವದೋ ಅಥವಾ ಭೂಮಿಯ ಮೇಲಿರುವದೋ, ಅದು ಉತ್ತಮವಾದ ಸ್ಥಾನದಲ್ಲಿರುವದೋ ಅಥವಾ ಕೆಟ್ಟ ಸ್ಥಾನದಲ್ಲಿರುವದೋ, ಅದು ಅದೆಯೋ ಅಥವಾ ಇಲ್ಲವೋ, ಅದು ಮಂತ್ರಗಳಲ್ಲಿರುವದೋ ಅಥವಾ ತಂತ್ರಗಳಲ್ಲಿರುವದೋ, ಅದು ತೀರ್ಥದಲ್ಲಿರುವದೋ ಅಥವಾ ಕ್ಷೇತ್ರದಲ್ಲಿರುವದೋ, ಅದು ಮೂತ್ರದಲ್ಲಿ ಹೊರಳಾಡುವದೋ ಅಥವಾ ಮಲದಲ್ಲಿ ಬಿದ್ದಿರುವದೋ, ಅದು ಶುದ್ಧಭೂಮಿಯಲ್ಲಿ ಬಿದ್ದಿರುವದೋ ಅಥವಾ ಅಪವಿತ್ರಸ್ಥಾನದಲ್ಲಿರುವದೋ, ಅದು ಜನವಸತಿಯಲ್ಲಿರುವದೋ ಅಥವಾ ವನದಲ್ಲಿರುವದೋ ಅಥವಾ ನಿರ್ಜನಸ್ಥಾನದಲ್ಲಿರುವದೋ, ಅದು ಸುಜನರಲ್ಲಿರುವದೋ ಅಥವಾ ದುರ್ಜನರಲ್ಲಿರುವದೋ, ಅದು ಕಾರಾಗೃಹದಲ್ಲಿರುವದೋ ಅಥವಾ ವಿಮಾನದಲ್ಲಿರುವದೋ, ಅದು ಮನೆಯಲ್ಲಿರುವದೋ ಅಥವಾ ಸ್ಮಶಾನದಲ್ಲಿರುವದೋ, ಅದು ಆನೆಯ ಮೇಲೆ ಕುಳಿತಿರುವದೋ ಅಥವಾ ಕುದುರೆಯ ಮೇಲಿರುವದೋ, ಅದು ಸ್ತ್ರೀ ಸಂಭೋಗದಲ್ಲಿ ತೊಡಗಿರುವದೋ ಅಥವಾ ವಿಷಯ ವಿರಕ್ತವಾಗಿರುವದೋ, ಅದು ಹೇಸರಗತ್ತೆಯ ಮೇಲೆ ಕುಳಿತಿರುವದೋ ಅಥವಾ ಸರ್ಪದ ಮೇಲಿರುವದೋ, ಅದು ಕಾಶಿಯಲ್ಲಿರುವದೋ ಅಥವಾ ಪಾಪಿಗಳ ದೇಶದಲ್ಲಿರುವದೋ, ಅದು ನರಕದಲ್ಲಿರುವದೋ ಅಥವಾ ವೈಕುಂಠದಲ್ಲಿರುವದೋ, ಅದು ಮನೆಯಲ್ಲಿರುವದೋ ಅಥವಾ ಗಿರಿಕಂದರಗಳಲ್ಲಿರುವದೋ, ಅದನ್ನು ಯಾರಾದರೂ ಪೂಜಿಸುವರೋ ಅಥವಾ ಅದನ್ನು ಯಾರಾದರೂ ಪೀಡಿಸುವರೋ, ಅದನ್ನು ಯಾರಾದರೂ ಹಿಡಿದಿರುವರೋ ಅಥವಾ ಅದನ್ನು ಹೊಡೆಯುತ್ತಿರುವರೋ, ಎಂಬದನ್ನು (ಜೀವನ್ಮುಕ್ತನು) ಸ್ಮರಿಸು

ವದಿಲ್ಲ. ಎಷ್ಟು ಮಾಡಿದರೂ ಅವನಿಗೆ ದೇಹದ ಸ್ಮರಣೆಯೇ ಬರುವದಿಲ್ಲ. ತಾನು ಶೇಷನನ್ನೇ ಹಾಸಿಗೆಮಾಡಿ ಅದರ ಮೇಲೆ ಮಲಗಿಕೊಂಡಿರುವೆನೋ ಅಥವಾ ತಾನು ಅಂತ್ಯಜರ ಮನೆಯಲ್ಲಿರುವೆನೋ ಅಥವಾ ತಾನು ಶೂಲದ ಮೇಲೆ ಕುಳಿತಿರುವೆನೋ ಎಂಬದನ್ನು ಸಹ ಅವನು (ಜೀವನ್ಮುಕ್ತನು) ಸ್ಮರಣಕ್ಕೆ ತರುವದಿಲ್ಲ. ಹೀಗೆ ಜೀವನ್ಮುಕ್ತಸ್ಥಿತಿಯನ್ನು ಹೊಂದಿದ ಆತ್ಮಜ್ಞಾನಿಗಳ ನಿರಭಿಮಾನತೆಯನ್ನು ನಾನು ವರ್ಣಿಸಲಾರೆನು. ಸಾಯುಜ್ಯತೆ (ಐಕ್ಯತೆಯನ್ನು) ಹೊಂದಿದ ಜ್ಞಾನಿಗಳ ಕಥೆಯನ್ನು ಹೇಳುವದು ನನ್ನಿಂದಲೂ ಸಾಧ್ಯವಿರುವದಿಲ್ಲ. ಯಾವ ಸಂತರ ಸ್ವರೂಪಾನಂದಸ್ಥಿತಿಯನ್ನು ವರ್ಣಿಸುವದಕ್ಕೆ ವೇದಗಳಿಗೂ ಅಸಾಧ್ಯವಾಗಿ ಅವು ಕಡೆಗೆ ಮೌನವನ್ನು ಧರಿಸಿದವೋ, ಸ್ವರ ವರ್ಣ ಶಬ್ದಗಳ ಶಕ್ತಿಯು ಕುಂಠಿತವಾಯಿತೋ ಅಂಥ ಆತ್ಮಜ್ಞಾನಿಗಳಾದ ಸಂತರ ಕೀರ್ತಿಯನ್ನು ನನ್ನಂಥವನಿಗೂ ಕೂಡ ವರ್ಣಿಸಲು ಅಶಕ್ಯವಾಗಿರುವದು.

ಮುನಿಗಳೇ, ಈ ಜೀವನ್ಮುಕ್ತ ಆತ್ಮಜ್ಞಾನಿಗಳ ಸ್ಥಿತಿಯನ್ನು ಕೇಳಿ, ನಿಮಗೆ ಒಂದು ವೇಳೆ ನಿಮ್ಮ ಮನಸ್ಸಿನಲ್ಲಿ, "ಆತ್ಮಜ್ಞಾನಿಗಳಿಗೆ ಕೇವಲ ಜಡಮೂಢ ಸ್ಥಿತಿಯು ಪ್ರಾಪ್ತವಾಗಿ ಅದರಲ್ಲಿ ಯಾವ ಸ್ಫೂರ್ತಿಯು ಸ್ಫುರಣವಾಗುವದಿಲ್ಲ! ಕೇವಲ ಪಾಷಾಣದಂತೆ ಅದರ ಅಂತಃಕರಣವಾಗಿರುವದಿಲ್ಲ! ಅದರಲ್ಲಿ ಹೀಗೆ ಒಂದಾದರೂ ಸ್ಫೂರ್ತಿಯು ಸ್ಫುರಣ ಹೊಂದುವದಿಲ್ಲವಲ್ಲ!! ಇದೆಂಥ ಜೀವನ್ಮುಕ್ತ ಸ್ಥಿತಿಯು! ಇದೆಂಥ ಆತ್ಮಜ್ಞಾನವು!! ಎಂಥ ಜಾಗೃತ್ವವು!!!" ಎಂದು ಸಂದೇಹವು ಉಂಟಾಗುವದು ಸಹಜವು. ಆದರೆ ಮುನಿಗಳೇ, ನಿಮ್ಮ ಸಂಶಯಪರಾಭವವನ್ನು ಮಾಡುವೆನು ಸಾವಧಾನರಾಗಿ ಕೇಳಿರಿ. ಜ್ಞಾನ ಹಾಗು ಅಜ್ಞಾನ ಇವುಗಳ ಅವಸ್ಥೆಗಳನ್ನು ತರ್ಕಿಸುವದೂ ನಿಶ್ಚಯ ಮಾಡುವದೂ ಲೋಕದವರಿಂದ ಎಂದಿಗೂ ಆಗುವದಿಲ್ಲ. ಕೇವಲ ಶುದ್ಧಜ್ಞಾನ ಹಾಗು ಕೇವಲ ಜಡಮೂಢ ಜ್ಞಾನ ಇವೆರಡುಗಳ ಅವಸ್ಥೆಯು ಒಂದೇ ಸಮಾನವಾಗಿರುವದು. ಅದರ ಗುರುತನ್ನು ನಾನೊಬ್ಬನು ಒಲ್ಲೆನು. ಮೊದಲೇ ನಿಬಿಡವಾದ ಅಂಧಕಾರ ಅದರೊಳಗೆ ಕಾಡಿಗೆಯ ಗುಡ್ಡ. ಅದನ್ನು ವಿಭಾಗ ಮಾಡಲು ಕುರುಡನು ಬಂದಂತೆ ಅಜ್ಞಾನದ ವ್ಯವಹಾರವು. ಅತ್ಯುತ್ತಮವಾದ ಅಧ್ಯಾತ್ಮಜ್ಞಾನ ಗ್ರಂಥಗಳನ್ನು ಶೋಧಿಸುವದಕ್ಕೋಸ್ಕರ ಅಂಧನೂ, ಮೂಕನೂ ಆದ ಪುರುಷನ ಕೈಯಲ್ಲಿ ಕೊಡಲು, ಅವನು ನೋಡಲಾರನು, ಮಾತಾಡಲಾರನು, ಕೇಳಲಾರನು. ಹೀಗೆಯೇ ಅಜ್ಞಾನಕ್ಕೆ ಜಡತ್ವ ಬಂದಿರುವದು. ಈ ಪ್ರಕಾರ ಅಜ್ಞಾ

ನಿಗಳ ಸ್ಥಿತಿಯಿರುವದು. ಇನ್ನು ಆತ್ಮಜ್ಞಾನಿಗಳ ಸ್ಥಿತಿಯನ್ನು ಕೇಳಿರಿ. ಆತ್ಮಜ್ಞಾನಿಗಳಿಗೆ ಅಪರೋಕ್ಷ ಆತ್ಮಸಾಕ್ಷಾತ್ಕಾರದ ಅನುಭವವು ಪ್ರಾಪ್ತವಾಗಿರುವದರಿಂದ, ಅವರು ದೇಹದಿಂದ ಇದ್ದರೂ ಅವರು ವಿದೇಹಸ್ಥಿತಿಯಲ್ಲಿರುವರು. ಉದಾ:—ರತ್ನಗಳು, ಹಾಗು ಅಚ್ಛಬಿಳಿಯ ಕಲ್ಲುಹರಳುಗಳು ಇವುಗಳ ಸ್ಥಿತಿಯು ಒಂದೇ ಸಮಾನವಾಗಿರುವದು. ದೂರಿನಿಂದ ನೋಡಲಿಕ್ಕೆ ಅವುಗಳಲ್ಲಿ ಭೇದವೇ ಕಾಣುವದಿಲ್ಲ; ಆದರೆ ಪರೀಕ್ಷಾವಂತರು ಅವುಗಳನ್ನು(ರತ್ನ, ಬಿಳಿಯಕಲ್ಲುಹರಳುಗಳನ್ನು) ಪರೀಕ್ಷಿಸಿ, ಬೆಲೆಯನ್ನು ಕೊಟ್ಟು ರತ್ನಗಳನ್ನು ತಕ್ಕೊಂಡು ಹೋಗುವರು. ಬಿಳಿಯ ಕಲ್ಲುಹರಳುಗಳನ್ನು ಪುಕ್ಕಟೆಯಾಗಿ ತೆಗೆದುಕೊಂಡು ಹೋಗೆಂದರೂ ಅವರು ಅವುಗಳನ್ನು ಒಯ್ಯಲಾರರು. ನೋಡುವದಕ್ಕೆ ಜ್ಞಾನ, ಅಜ್ಞಾನಗಳು ಸಮಸಮವಾಗಿ ಕಾಣುವವು. ನಿಜವಾದ ನಾಣ್ಯವನ್ನೂ, ಖೊಟ್ಟಿ ನಾಣ್ಯವನ್ನೂ ನೋಡಿದರೆ, ಅವು ಕಾಣಲಿಕ್ಕೆ ಒಂದೇ ಸಮವಾಗಿ ಕಾಣುವವು; ಆದರೆ ಪರೀಕ್ಷಾವಂತರು ಆ ಎರಡು ತರದ ನಾಣ್ಯಗಳನ್ನು ಪರೀಕ್ಷಿಸಿ, ಖರೇ (ನಿಜವಾದ) ನಾಣ್ಯವನ್ನು ತಕ್ಕೊಳ್ಳುವನು; ಆದರೆ ಮೂರ್ಖನಿಗೆ ಪರೀಕ್ಷೆ ಗೊತ್ತಾಗದೆ, ಅವನು ಅಸತ್ಯವಾದ ನಾಣ್ಯಕ್ಕೆ ಮರುಳಾಗುವನು. ಇದರಂತೆ ಜ್ಞಾನ, ಅಜ್ಞಾನಗಳ ಪೇಟೆಯಲ್ಲಿ ಜ್ಞಾನ, ಅಜ್ಞಾನಗಳೆರಡನ್ನು ಮಿಶ್ರಮಾಡಿ ಇಟ್ಟಿರುವರು. ಅವುಗಳ ಹತ್ತರ ಹೋಗಲಿಕ್ಕೆ ಒಂದೇ ಹಾದಿ ಇರುವದು. ಒಂದು ಅಂಶ ಮಾತ್ರ ಹಾದಿಯನ್ನು ನಾವು ತಪ್ಪಿದರೆ, ಪಾಖಂಡತನವು ನಮ್ಮಲ್ಲಿ ಬರುವದು; ಆದ್ದರಿಂದ ಯಾವ ಭಕ್ತರು ನನ್ನಲ್ಲಿ (ಭಗವಂತನಲ್ಲಿ) ಸಂಪೂರ್ಣ ಭಕ್ತಿಯನ್ನಿಟ್ಟು, ನನ್ನಲ್ಲಿ (ಭಗವಂತನಲ್ಲಿ) ದೃಢವಾದ ನಂಬಿಗೆಯನ್ನಿಟ್ಟಿರುವರೋ ಅವರಿಗೆ ನಾನು ನನ್ನ ನಿಜವೂ, ಅತ್ಯಂತ ಶುದ್ಧವೂ ಆದ ನಿಜರೂಪವನ್ನು ಕೊಡುವೆನು.

ಮುನಿಗಳೇ, ಪ್ರಹ್ಲಾದನು ನನ್ನ (ಭಗವಂತನ)ನಾಮದಲ್ಲಿ ದೃಢವಾದ ವಿಶ್ವಾಸವನ್ನಿಟ್ಟದ್ದರಿಂದ, ಸುಖ-ದುಃಖ ನಿಂದಾ-ಸ್ತುತಿ ಇವೇ ಮೊದಲಾದ ದ್ವಂದ್ವಗಳನ್ನು ತನ್ನ ಕಾಲುಗಳ ಬುಡಕ್ಕೆ ಹಾಕಿ ತುಳಿದನು. ಅವನಿಗೆ ಮುಕ್ತಿಯ ಇಚ್ಛೆಯಿಲ್ಲದಿದ್ದರೂ ಅದು ಅವನ ಬೆನ್ನು ಹತ್ತಿ ಹೋಯಿತು. ಕೊನೆಗೆ ಆ ಪ್ರಹ್ಲಾದಭಕ್ತನು ಭಗವಂತನ ನಾಮದಲ್ಲಿ ವಿಶ್ವಾಸವಿಟ್ಟದ್ದರಿಂದ ಅವನಿಗೆ ನನ್ನ (ಆತ್ಮ)ನಿಜಸ್ವರೂಪದ-ದರ್ಶನವಾಯಿತು. ಉಪ್ಪು ನೀರಿನಲ್ಲಿ ಕೂಡಲು, ಉಪ್ಪು ತನ್ನ ಉಪ್ಪುತನವನ್ನೇ ಕಳಕೊಳ್ಳುವದು. ಉಪ್ಪು ಕರಗಿ ನೀರಾಗಿ ನೀರಿನಲ್ಲಿ

ಐಕ್ಯವಾಗುವದು. ಅದರಂತೆ ನನ್ನಭಕ್ತರು ಭಗವದ್‌ಭಾವನೆಯಿಂದ, ನನ್ನ ನಿಜ ಸ್ವರೂಪವನ್ನು ಹೊಂದಿ, ಭಗವತ್ (ಆತ್ಮ)ಸ್ವರೂಪರೇ ಆಗುವರು. ಆತ್ಮನಲ್ಲಿ ಐಕ್ಯಹೊಂದುವರು. ಉಪ್ಪು ನೀರಿನಲ್ಲಿ ಕೂಡಲು, ಅದಕ್ಕೆ ನಾನೊಂದು ಉಪ್ಪುವೆಂಬ ಪದಾರ್ಥವಿರುವೆನೆಂಬ ಸ್ಮರಣವೂ ಕೂಡ ಇಲ್ಲದಂತೆ ಆಗುವದು. ಅದು ತಾನೇ ಸಮುದ್ರವೇ ಆಗಿ ಹೋಗುವದು. ಅದರಂತೆ ಆತ್ಮಜ್ಞಾನಿಯು ನನ್ನ (ಆತ್ಮ)ರೂಪದಲ್ಲಿ ಕೂಡಲು ಅನಿವಗೆ ನಾನೊಬ್ಬ ವ್ಯಕ್ತಿ ಇರುವೆನೆಂಬ ನೆನಪೇ ಇರುವದಿಲ್ಲ. ಅವನು ಆತ್ಮಸ್ವರೂಪವೇ ಆಗಿರುವನು. ಈ ಪ್ರಕಾರ ಜೀವನ್ಮುಕ್ತ ದಸೆಯನ್ನು ಹೊಂದಿದ ಆತ್ಮಜ್ಞಾನಿಗಳು ನನ್ನ (ಆತ್ಮ) ನಿಜಸ್ವರೂಪವನ್ನು ಹೊಂದಿ ದೇಹಾಭಿಮಾನವನ್ನು ಮರೆತು ಬಿಡುವರು. ಅವರು ಸರ್ವರಲ್ಲಿರುವ ಚೈತನ್ಯಘನವಾದ ಪರಮಾತ್ಮನೇ ಆಗುವರು. ಮತ್ತು ಆನಂದ ಮಯವಾದ ಏಕಾತ್ಮತೆಯಲ್ಲಿ (ಆನಂದಸಮರಸದಲ್ಲಿ)ನಿಮಗ್ನರಾಗುವರು. ಹಗ್ಗದಲ್ಲಿ ಸರ್ಪಭಾವವು ಉತ್ಪತ್ತಿಯಾಯಿತು. ಅದು ಸ್ವಲ್ಪ ಹೊತ್ತು ಸುಖವಾಗಿದ್ದು ಮತ್ತೆ ಅವಿದ್ಯೆಯು ಹೋದಬಳಿಕ ಅದು ಹೋಗಿ ಇಲ್ಲದಂತಾಗುವದು. ಇದರಂತೆ ಮುಕ್ತರಿಗೆ ದೇಹಭಾವವು ದೇಹದಸ್ಥಿತಿ ಹಾಗು ನಾಶ ಇವೆರಡುಗಳ ಕಲ್ಪನೆಯಾದರೂ ಮುಕ್ತರಿಗಿರುವದಿಲ್ಲ. ಆಗ ಅವರಿಗೆ 'ನಾನು' 'ನೀನು' ಎಂಬ ಸ್ಮರಣವೂ ಇರುವದಿಲ್ಲ. ನೆನಪುಮಾಡುವವರಾದರೂ ಯಾರು ಇರುವರೆಂಬದನ್ನು ಅಂತಃಕರಣವು ಮರೆತು ಬಿಟ್ಟಿರುವದು. ಮುಕ್ತರು ತಮ್ಮನ್ನು ತಾವೇ ಮರೆತುಬಿಡುವರು. ಮುಕ್ತರು ನಿಜಾತ್ಮಸ್ವರೂಪದಲ್ಲಿ ಮಗ್ನರಾಗಿ ದೇಹಭಾವವನ್ನು ಮರೆತಿರುವಾಗ, ಅವರಿಗೆ ಸ್ವರ್ಗವು ಎಂಥದು, ನರಕವು ಎಂಥದು, ಶುದ್ಧವಾದದ್ದೆಂಥದು, ಮಲಿನವಾದದ್ದಾವದು ಹದಿನಾಲ್ಕು ಲೋಕಗಳು ಎಂಥವು? ಅವರಿಗೆ ಬ್ರಹ್ಮವಸ್ತುವೊಂದೇ ಒಂದು ಕಾಣುವದು. ಇಂಥ ಜೀವನ್ಮುಕ್ತನಿಗೆ ಪವಿತ್ರವಾವುದು, ಅಪವಿತ್ರವಾವುದು ಅವನಿಗೆ ಎಲ್ಲಿಯ ತೀರ್ಥಕ್ಷೇತ್ರಗಳು? ಅವನಿಗೇಕೆ ವೇದಗಳೂ, ಶಾಸ್ತ್ರಗಳೂ, ಸ್ವತಂತ್ರವೂ, ಅದ್ವಯವೂ ಆದ ಬ್ರಹ್ಮವಸ್ತುವೇ ತಾವು ಆಗಿರುವರು. ಇಂಥ ಮುಕ್ತರಿಗೆ ಉತ್ಪತ್ತಿವಿನಾಶಗಳೆಲ್ಲಿ? ಎಲ್ಲಿ ವೈಕುಂಠ ಎಲ್ಲಿ ಕೈಲಾಸ? ಎಲ್ಲಿ ಬ್ರಹ್ಮನು ಎಲ್ಲಿ ವಿಷ್ಣುವು ಎಲ್ಲಿ ಮಹೇಶ್ವರನು? ಅವಿನಾಶವಾದ ಬ್ರಹ್ಮವೊಂದೇ ತಾನಾಗಿ ಉಳಿದಿರಲು, ಮೇಲಿನ ವಸ್ತುಗಳಿಂದ ಅವರಿಗೇನು ಪ್ರಯೋಜನ? ಮುಕ್ತರಿಗೆಲ್ಲಿಯ ಬೋಧವು? ಎಲ್ಲಿಯು ಬುದ್ಧಿಯು? ಮುಕ್ತರಿಗೆ ಅವರ ನಿಜಾತ್ಮಸ್ಥಿತಿಯಲ್ಲಿ ದೇವತ್ವವೂ ಪೂರ್ಣಾ

ಮುಳುಗಿಹೋಗಿ ಮೋಕ್ಷಸಿದ್ಧಿಯೂ ಸಹ ನಾಚಿಕೆಯಿಂದ ಹೊರಟು ಹೋಗುವದು. ಹೀಗಿರಲು, ಅಲ್ಲಿ ನಿಜಾತ್ಮಸ್ವರೂಪ ಹೊಂದಿದಾಗ ಎಲ್ಲಿಯ ಕ್ಷೀರ ಸಾಗರದಲ್ಲಿ ಮಲಗಿದ ಶೇಷಶಾಯಿಯಾದ ನಾರಾಯಣನು? ಇವೆಲ್ಲ ಕಾರಣಗಳಿಂದ ದೇಹವು ಮಾಡುತ್ತದೆ ಅಥವಾ ನಿಂತಿರುತ್ತದೆ ಅಥವಾ ದೇಹವು ಹೋಗುವದು ಬರುವದು ಎಂಬ ಸ್ಫುರಣವೇ ಆತ್ಮಜ್ಞಾನಿಗೆ ನಿಜಾತ್ಮಸ್ಥಿತಿಯಲ್ಲಿ ಆಗುವದಿಲ್ಲ. ಇದೇ ತತ್ವವನ್ನು ಮುನಿಗಳೇ, ನಿಮಗೆ ವಿಶದವಾಗಿ ಈ ಪ್ರಕಾರ ತಿಳಿಸಿ ಹೇಳಿರುವೆನು.

## ಆಶಂಕೆ ಸಿದ್ಧಾಂತಗಳು.

ಮುನಿಗಳೇ, ನೀವು ನಿಮ್ಮ ಮನಸ್ಸಿನಲ್ಲಿ, ಅವಿದ್ಯೆಯು ಕಾರಣವು; ದೇಹವು ಕಾರ್ಯವು. ಅವಿದ್ಯೆಯು ನಾಶಹೊಂದಲು, ಅಂದರೆ ಕಾರಣವು ನಾಶವಾಗಲು, ಕಾರ್ಯವು (ದೇಹವು) ಇರುವದೆಂಬದು ಎಂದಿಗೂ ಸಂಭವನೀಯವಲ್ಲ, ಎಂದು ಸಂದೇಹವನ್ನು ತಂದರೆ, ಇದಕ್ಕೆ ಪರಿಹಾರವನ್ನು ಹೇಳುವೆನು ಕೇಳಿರಿ. ಸಿದ್ಧಾಂತ:—ನಾವು ಒಂದು ಗಿಡವನ್ನು ಪೂರಾ ಕಿತ್ತು ಹಾಕಿಬಿಟ್ಟರೆ, ಅದರಲ್ಲಿರುವ ಹಸಿಯು ಕೂಡಲೇ ಹೊರಟು ಹೋಗುವದಿಲ್ಲ. ಆ ಗಿಡದ ಎಲೆ-ಹೂ-ಕಾಯಿಗಳು ಕೆಲಹೊತ್ತು ಹಸಿಯಾಗಿಯೇ ಹಚ್ಚಗಾಗಿಯೇ ಇರುವವು. ಎಷ್ಟೋಕಾಲ ಕಳೆದ ಬಳಿಕ ಅವೆಲ್ಲ ಒಣಗಿ ಹೋಗುವವು. ಅದರಂತೆ ಅವಿದ್ಯೆಯು ನಾಶವಾಗಿ ಹೋದರೂ, ಭೋಗಾನುರೂಪವಾಗಿ ದೈವವೊಂದಿದ್ದೇ ಇರುವದು; ಆದ್ದರಿಂದ ಜ್ಞಾನಿಯು ನಮ್ಮಂತೆ ನಿಜದೇಹಧಾರಣ ಮಾಡಿದಾಗ್ಯೂ ಅವನು ವಿದೇಹಸ್ಥಿತಿಯಲ್ಲಿರುವನು. ಮತ್ತೆ ಮುನಿಗಳ ಸಂದೇಹವು:—ದೇಹವನ್ನು ನಾವು ಎಷ್ಟು ಕಷ್ಟಪಟ್ಟು ಬೆಳಿಸಿದರೂ, ಅದನ್ನು ಸುಖವಾಗಿ ಪ್ರತಿಪಾಲನ ಮಾಡಿದರೂ, ಅದನ್ನು ಎಷ್ಟು ಜೋಪಾನ ಮಾಡಿದರೂ ಅದು ಬಿದ್ದು ಹೋಗುವದೆಂಬದು ಪ್ರತ್ಯಕ್ಷವಾಗಿ ನಮಗೆ ಕಾಣುವದು. ಇನ್ನು ಯಾವ ಆತ್ಮಜ್ಞಾನಿಗಳು ದೇಹಧಾರಣ ಮಾಡಿರುವರೋ ಅವರ ದೇಹಗಳು ಪಾಲನೆ-ಪೋಷಣೆಗಳಿಂದ ದೃಢವಾಗಿರದಿದ್ದರೆ, ಅವು ಕೂಡಲೆ ಬಿದ್ದು ಹೋಗಬೇಕು; ಯಾಕಂದರೆ ದೇಹವನ್ನು ಎಷ್ಟು ಪರಿಯಿಂದ ಬೆಳಿಸಿದರೂ ಅವು ನಷ್ಟವಾಗುವಾಗ ಇನ್ನು ಪೋಷಣೆಯಿಲ್ಲದ ದೇಹಗಳಂತು ಕೂಡಲೆ ಬಿದ್ದು ಹೋಗಬೇಕು. ಅಂದಬಳಿಕ ಯಾವ ದೇಹಕ್ಕೆ ಪೋಷಣೆಯಿಲ್ಲವೋ ಅದು ಕೂಡಲೆ ಬಿದ್ದು ಹೋಗಬೇಕೆಂಬದು ನಿಶ್ಚಯವಿರು

ವಾಗ, ಅದು ಪೋಷಣೆಯಿಲ್ಲದೆ ಬದುಕಿರುವದೆಂಬದು ಯಾವ ಆಧಾರದ ಮೇಲೆ ಸಿದ್ಧವಾಗುವದು? ಯಾವನು ದೇಹಧಾರಣ ಮಾಡಿರುವನೋ, ಅಥವಾ ಯಾವನ ದೇಹವಿರುವದೋ ಅವನು ತನ್ನ ದೇಹವನ್ನು ಕೇಳದಿದ್ದರೆ, ಅಂದರೆ ಅದರ ಕಡೆಗೆ ಲಕ್ಷಗೊಡದೆ ಅದನ್ನು ಉದಾಸೀನ ಮಾಡಿ ಪೋಷಿಸದೆ ಇದ್ದರೆ, ಅದು ಕರ್ಮಗಳ ಸ್ವಾದರೂ ಹ್ಯಾಗೆ ಮಾಡುವದು? ಎಂದು ನೀವು ಸಂದೇಹವನ್ನು ಮನಸ್ಸಿನಲ್ಲಿಕಲ್ಪಿಸಿದರೆ, ಆ ಸಂದೇಹ ನಿವಾರಣವನ್ನು ಮಾಡುವೆನು, ಏಕಚಿತ್ತರಾಗಿ ಕೇಳಿರಿ.

ಸಿದ್ಧಾಂತ:—ಮುನಿಗಳೇ, ದೇಹದ ಉತ್ಪತ್ತಿಯೂ, ಸ್ಥಿತಿಯೂ, ನಾಶವೂ ಪುರುಷನ ವಶದಲ್ಲಿರುವದಿಲ್ಲ. ಅದಕ್ಕೆ ಅದೃಷ್ಟವೇ ಪ್ರಮಾಣವು. ದೈವಯೋಗದಿಂದ ದೇಹದ ಚಲನವಾಗುವದು. ದೇಹವು ದೈವಗುಣದಿಂದ ನಿಲ್ಲುವದು ಕೂಡ್ರುವದು; ಅದೃಷ್ಟಗತಿಯಿಂದ ಅದು ತಕ್ಕೊಳ್ಳುವದು ಹಾಗು ಕೊಡುವದು; ಅದೃಷ್ಟದಿಂದಲೇ ಅದು ತಿನ್ನುವದು ಉಣ್ಣುವದು. ಸ್ವದೇಶಕ್ಕಾಗಲಿ ಪರದೇಶಕ್ಕಾಗಲಿ ಅದೃಷ್ಟವೇ ದೇಹವನ್ನು ಕರಕೊಂಡು ಹೋಗುವದು. ಅದೃಷ್ಟವೇ ಸ್ವರ್ಗ ನರಕ ಭೋಗಗಳನ್ನು ದೇಹಕ್ಕೆ ತಂದುಕೊಡುವದು. ದೇಹಕ್ಕೆ ಯಶ, ಲಾಭ, ಹಾನಿ, ಮೃತ್ಯುಗಳು ಬರುವವು. ಇದಕ್ಕೆಲ್ಲ ಅದೃಷ್ಟವೇ ಕಾರಣವು. ಘಟ (ಕೊಡ)ದಲ್ಲಿ ಇರುವ ಚಂದ್ರನಂತೆ ಆತ್ಮಜ್ಞಾನಿಯು ದೇಹದಿಂದ ಅಲಿಪ್ತನಾಗಿರುವನು. ಪುರುಷನ ನೆರಳು ಪುರುಷನ ಸಂಗಡ ಇದ್ದು ಅವನು ಚಲನ ಮಾಡಿದಂತೆ ಮಾಡುವದು. ಅದರಂತೆ ಆತ್ಮಜ್ಞಾನಿಯ ದೇಹವಿರುವದು. ಅದೃಷ್ಟ ಅಥವಾ ಪೂರ್ವಕರ್ಮಗಳಿರುವಂತೆ ದೇಹವು ಸ್ವಕರ್ಮ ಫಲಭೋಗ ಮಾಡುವದು. ಆದರೆ ಆತ್ಮಜ್ಞಾನಿಗೆ ಅದರ ಸುದ್ದಿಯೇ ಇರುವದಿಲ್ಲ ದೇಹವು ಹುಟ್ಟಿದ ಕೂಡಲೆ ಅದರ ಛಾಯೆಯೂ ಹುಟ್ಟುವದು; ಅದು ಬೆಳೆಯಲು ನೆರಳೂ ಬೆಳೆಯುವದು. ಆದರೆ ಅದಕ್ಕೆ (ನೆರಳಿಗೆ) ನನ್ನದೆಂಬ ಅಹಂಕಾರವು ಬರುವದಿಲ್ಲ. ಇದರಂತೆ ದೇಹವು ಜ್ಞಾನಿಯ ಮುಂದೆ ಬಂದು, 'ನಾನು' ಎಂದು ಅನ್ನಲಾರದು. ದೇಹದ ಸಂಗಡ ಛಾಯೆಯು ಯಾವಾಗಲೂ ಇರುವದು. ಆದರೆ ಅದು ಎಲ್ಲಿ ಇರುವದು ಎಲ್ಲಿ ಇರುವದಿಲ್ಲ ಎಂಬದನ್ನು ದೇಹವು ಕೇಳುವದಿಲ್ಲ. ಇದರಂತೆ ಜ್ಞಾನಿದೇಹದ ವರ್ತನವಿರುವದು. ನೆರಳು ಮಲದಮೇಲೆ ಬೀಳಲಿ, ಅದು ಪಲ್ಲಕ್ಕಿಯಲ್ಲಿ ಕೂಡ್ರಲಿ, ಅದರ ಸುಖ-ದುಃಖಗಳು ಪುರುಷನಿಗೆ ಹತ್ತುವದಿಲ್ಲ. ಇದರಂತೆ ಜ್ಞಾನಿಗೆ ದೇಹಭೋಗವು; ಆತ್ಮಜ್ಞಾನಿಗೆ ನಿಜದೇಹದ ಮರವು ಹ್ಯಾಗೆ ಆಯಿತೆಂಬದನ್ನು ಉದಾಹರಣೆ ಕೊಟ್ಟು ಹೇಳವೆನು

ಕೇಳಿರಿ ಯಾವನು ಜಿಲೆ(ದುಡ್ಡು)ಕೊಟ್ಟು ಸೆರೆಯನ್ನು ಕುಡಿಯುವನೋ ಅವನು ಆ ಮದ್ಯದ ಮದದಿಂದ ಕುಣಿಯುವನು, ಹಾಡುವನು, ದೇಹದ ಪರಿವೆಯೇ ಅವನಿಗಿರುವದಿಲ್ಲ. ತನ್ನ ಮೈಮೇಲೆ ಬಟ್ಟೆಯಿರುವದೋ ಇಲ್ಲೋ ಎಂಬ ದರ ಸ್ಮರಣವೇ ಅವನಿಗಿರುವದಿಲ್ಲ. ಇದರಂತೆ ಬ್ರಹ್ಮರಸವನ್ನು ಪಾನಮಾಡಿ ತೃಪ್ತನಾದ ಆತ್ಮಜ್ಞಾನಿಗೆ, ಆ ಬ್ರಹ್ಮರಸದ ಮದದಿಂದ ದೇಹವು ಅದೆಯೋ ಸತ್ತಿರುವದೋ ಎಂಬದು ನೆನಪಿರುವದಿಲ್ಲ. ಈ ಪ್ರಕಾರ ದೇಹಕ್ಕೆ ಭರಣ (ಚರಿತಾರ್ಥ) ಪೋಷಣಗಳಾಗಲಿ, ಜನ್ಮ-ಮರಣಗಳಾಗಲಿ ದೈವಯೋಗದಿಂದ ಉಂಟಾಗುತ್ತವೆ.

ದೇಹದ ವರ್ತನವೆಲ್ಲ ಪ್ರಾರಬ್ಧಕರ್ಮದ ಅಧೀನವಾಗಿರುವದು. ಇದರ ನಿಜವನ್ನು ತಿಳಿಯದೆ ಅಜ್ಞಾನಿಗಳು ದೇಹಾಭಿಮಾನಕ್ಕೆ ಒಳಗಾಗುವರು; ಆದರೆ ಜ್ಞಾನಿಗಳಿಗೆ ದೇಹವು ಅದೃಷ್ಟದಂತೆ ವರ್ತಿಸುವದೆಂಬ ನಿಶ್ಚಯವಿರುವದರಿಂದ ಅವರು ದೇಹಾಭಿಮಾನಕ್ಕೆ ಒಳಗಾಗುವದಿಲ್ಲ ಪೂರ್ವಜನ್ಮಾರ್ಜಿತ ಅದೃಷ್ಟವು ಹ್ಯಾಗೆ ಇರುವದೋ ಅದರಂತೆ ದೇಹವು ಈಗ ಇಲ್ಲಿ ಹುಟ್ಟುವದು. ಪೂರ್ವಾರ್ಜಿತ ಕರ್ಮಾನುಸಾರವಾಗಿಯೇ ವರ್ತಿಸುವದಕ್ಕೆ ಅನುಕೂಲವಾಗುವಂತೆ ದೇಹವು ಅದೇ ಪ್ರಕಾರ ಇಂದ್ರಿಯ ಪ್ರಾಣಗಳಸಹಿತವಾಗಿ ಹುಟ್ಟಿಬರುವದು.

ಆಶಂಕೆ:—ದೈವಯೋಗದಿಂದ ಆತ್ಮಜ್ಞಾನಿಯೇ ಆಗಲಿ ದೇಹಧಾರಣ ಮಾಡಿರುವಾಗ, ಅವನಲ್ಲಾದರೂ ದೇಹಾಹಂಕಾರವು ಬೆಳೆಯಲೇ ಬೇಕು. ಎಷ್ಟೋ ಜನ ಮಾರ್ಗಸ್ಥರು ಕೂಡಿಕೊಂಡು ಒಂದೇ ಸ್ಥಾನಕ್ಕೆ ಹೋಗುವವರಿದ್ದರೂ, ಅವರು ತಮ್ಮ ತಮ್ಮ ಅದೃಷ್ಟದಂತೆ ವ್ಯಥೆಗಳನ್ನು ಭೋಗಿಸುವರು. ಉಪ್ಪನ್ನು ನೀರಲ್ಲಿ ಕೂಡಿಸಲು, ಆ ನೀರು ಕೂಡಲೆ ಉಪ್ಪಾಗುವದು. ಇದರಂತೆ ಆತ್ಮಜ್ಞಾನಿಯಾದರೂ ದೇಹದ ಸಂಗತಿಯಿಂದ, ದೇಹಾಭಿಮಾನಿಯಾಗುವನು. ದುರ್ಧರವಾದ ಅಗ್ನಿಯು ಕೂಡ ಕಬ್ಬಿಣ ಸಹವಾಸದಿಂದ ಕಮ್ಮಾರನ ಸುತ್ತಿಗೆಯಿಂದ ಹೊಡತಗಳನ್ನು ತಿನ್ನುವದು. ಅದರಂತೆ ದೇಹದ ಸಂಗತಿಯಿಂದ ಆತ್ಮಜ್ಞಾನಿಯಾದರೂ ಸುಖದುಃಖಗಳನ್ನು ಭೋಗಿಸುವನು." ಹೀಗೆ ನೀವು ಮನಸ್ಸಿನಲ್ಲಿ ಸಂದೇಹವನ್ನು ಕಲ್ಪಿಸಿದರೆ, ನಿಮ್ಮ ಸಂದೇಹ ನಿರಸನ ಕ್ಕೋಸ್ಕರ ಹೇಳುವೆನು ಕೇಳಿರಿ.

ಸಿದ್ಧಾಂತ:-ಮುನಿಗಳೇ, ಆತ್ಮಜ್ಞಾನಿಯು ಭವಾತೀತನೂ, ಗುಣಾತೀತನೂ ಆಗಿ, ಅಹಂಭಾವವನ್ನು ನಿರ್ಮೂಲನ ಮಾಡಿ ಬಿಟ್ಟಿರುವನು.

ಅವನು ಚಿತ್‌ಸ್ವರೂಪದಲ್ಲಿ ಐಕ್ಯನಾಗಿ ಸಮಾಧಿಸ್ಥನಾಗಿ ಉಳಿತಿರುವನು. ಅಧಿರೂಢಸಮಾಧಿಯೋಗಪದವಿಯೇ ಮೊದಲು ಅಭಂಗವಾಗಿರುವದು. ಆದರಿಂದ ಆತ್ಮಜ್ಞಾನಿಯ ಸಮಾಧಿಯು ಅತ್ಯಂತ ನಿರ್ದೋಷವಾಗುವದು. ಈ ಸಮಾಧಿಯು ಆತ್ಮಜ್ಞಾನಿಗೆ ನಿಜಾತ್ಮಾನುಬೋಧದಿಂದ ಪ್ರಾಪ್ತವಾಗಿರುವದು.

## ಅಧಿರೂಢಸಮಾಧಿಯ ಲಕ್ಷಣಗಳು.

ಈ ಲಕ್ಷಣಗಳನ್ನು ಕೇಳಿರಿ. ಆತ್ಮಜ್ಞಾನಿಯು ದೇಹದಿಂದ ಇದ್ದರೂ ಸಹ, ಅವನು ದೇಹಕ್ಕೆ ಸಂಬಂಧವಾದ ಬಂಧನಗಳಲ್ಲಿ ಸಿಕ್ಕುಬೀಳುವದಿಲ್ಲ. ಕೇವಲ ತಾಟಸ್ಥ್ಯಕ್ಕೆ ಸಮಾಧಿಯೆಂದು ಕರೆದರೆ, ಆತ್ಮಜ್ಞಾನಿಯ ಬುದ್ಧಿಯು ಮೋಸ ಹೋದಂತಾಗುವದು; ಆದ್ದರಿಂದ ತಾಟಸ್ಥ್ಯವು ಸಮಾಧಿಯೇ ಅಲ್ಲ. ಈ ತಾಟಸ್ಥ್ಯದಲ್ಲಿ ವೃತ್ತಿಗೆ ಮೂರ್ಛೆಯ ಸಂಯೋಗವಾಗಿರುವದು; ಆದ್ದರಿಂದ ತಾಟಸ್ಥ್ಯವು ಸಮಾಧಿಯಲ್ಲ. ಸಮಾಧಿಯಲ್ಲಿ ಅಹಂಭಾವವು ಬೀಜ ಮಾತ್ರವಾದರೂ ಇರುವದಿಲ್ಲ. ವಾಸನೆಯೂ ಕೂಡ ಲವ ಮಾತ್ರವಾದರೂ ಇರುವದಿಲ್ಲ. ನಿರಭಿಮಾನತ್ವವಿರಬೇಕು; ಮತ್ತು ಅದು ಅಖಂಡವಾಗಿರಬೇಕು. ಇದಕ್ಕೇ ಅಖಂಡವಾದ ಸಮಾಧಿಯೆಂದೆನ್ನುವರು; ಆದರೆ ಕಾಷ್ಠದಂತೆ ಸ್ಥಿತಿಯಿರುವದು ಸಮಾಧಿಯ ಲಕ್ಷಣವಲ್ಲ. ತಾಟಸ್ಥ್ಯಕ್ಕೇ ಸಮಾಧಿಯೆಂದು ಯಾರು ತಿಳಿಯುವರೋ, ಅವರಿಗೆ ನಿಶ್ಚಯವಾಗಿ ಸ್ವಸ್ವರೂಪ ಜ್ಞಾನವಿರುವದಿಲ್ಲೆಂದು ತಿಳಿಯಬೇಕು. ಅವರ ಈ ಮಾತು ಅನುಮಾನದ್ದು, ಪ್ರಚಂಡವಾದ ಆಘಾತದಿಂದ (ಹೊಡತದಿಂದ) ಪುರುಷನಿಗೆ ತತ್ಕಾಲದಲ್ಲಿ ಮೂರ್ಛೆಯು (ತಾಟಸ್ಥ್ಯವು) ಬರುವದು. ಅದರಿಂದ ಏನಾಗುವದು? ಅದೇನೂ ಸಮಾಧಿಯಲ್ಲ, ಜನರನ್ನು ಮರಳು ಮಾಡಲಿಕ್ಕೆ ಮಾತ್ರ ಹೊಡಕೊಂಡು ಮೂರ್ಛೆಹೊಂದಿ ಸಮಾಧಿಯ ಸೋಗನ್ನು ತೋರಿಸುವರು. ಇದೆಲ್ಲಿಯ ಸಮಾಧಿಯು? ಇನಾಮಿನ ಆಶೆಯಿಂದಾಗಲೀ ಶಿಫಾರಸಿನ ಆಶೆಯಿಂದಾಗಲೀ ಮೂಲ ಬಂಧಾದಿಗಳನ್ನು ಮಾಡಿ ತೋರಿಸಿದರೂ ಅದು ಸಮಾಧಿಯಲ್ಲ. ವಾಯುಸ್ತಂಭನ ಮಾಡಿ ಬಹುಕಾಲದ ವರೆಗೆ ತಾಟಸ್ಥ್ಯವನ್ನು ತೋರಿಸಿದರೂ ಸಹ ಅದಕ್ಕೆ ಸಮಾಧಿಯೆಂದುಕರೆಯಲಾಗದು; ಆದರೆ ವಾಸನೆಯು ಎಲ್ಲಿಯ ವರೆಗೆ ಹೋಗದೆ ಉಳಿದಿರುವದೋ ಅಲ್ಲಿಯ ವರೆಗೆ ಸತ್ಯವಾದ ಸಮಾಧಿ ಪ್ರಾಪ್ತಿಯಾಗಲಾರದು. ಕೃತ್ರಿಮಕೃತಿಯ ಯೋಗದಿಂದ ಮೇಲೆ ಹೇಳಿದಂತೆ ಹೊಡತಗಳಿಂದಾಗಲೀ, ವಾಯು ನಿರೋಧದಿಂದಾಗಲೀ, ಮೂಲ ಬಂಧಾದಿ ಮಾಡಿಯಾಗಲೀ ಕ್ಷಣಿಕ ಮೂರ್ಛೆಯಂತಿರುವ ಅಸತ್ಯವಾದ ಸಮಾಧಿ

ಯನ್ನು (ತಾಟಸ್ಥ್ಯವನ್ನು) ತೋರಿಸಿ, ಮೂರ್ಛೆಯು ಇಳಿದ ಬಳಿಕ ಡಂಭಾಚಾರಿಗಳಾದ ಪುರುಷರು ಎಚ್ಚರಿಕೆಗೆ ಬಂದು, ಯಜಮಾನನಿಗೆ ನೀವು ದಾನದಲ್ಲಿ ಕರ್ಣನಂತೆ ಇರುವಿರಿ. ತಮ್ಮ ಉದಾರತನಕ್ಕೆ ಒಪ್ಪುವಂತೆ ನನಗೆ ಇನಾಮು ಕೊಡಿರಿ, ಎಂದು ಕೇಳುವರು. ಇಂಥ ವಾಸನೆಯಿರುವ ವರೆಗೆ ಸಮಾಧಿಯು ಹ್ಯಾಗೆ ದೊರೆಯುವದು? ಆದ್ದರಿಂದ ನಿರ್ವಾಸನಾ ಲಕ್ಷಣವೇ ಸಮಾಧಿಯು. ಸಮಾಧಿಯಲ್ಲಿ ಸರ್ವ ಸಂಕಲ್ಪಗಳ ನಾಶವಾಗಿರಬೇಕು. ಅಂದರೆ ಅದಕ್ಕೆ ನಿರ್ವಿಕಲ್ಪ ಸಮಾಧಿಯೆಂದೆನ್ನುವರು. ಸಕಲ ಶಾಸ್ತ್ರಗಳು ಇದೇ ರೀತಿಯಾಗಿ ಪ್ರತಿಪಾಲಿಸುವವು. ಇದಕ್ಕೇ ನಿಜವಾದ ಸಮಾಧಿಯೆಂದೆನ್ನಬೇಕು.

ಆಡಿನ ಹತ್ತಿರ ದೊಡ್ಡ ಸರ್ಪವು ಬಂದಕೂಡಲೆ, ಆ ಆಡಿನ ಸಕಲ ವೃತ್ತಿಗಳೂ ತಟಸ್ಥವಾಗುವವು. ಇಂಥ ತಾಟಸ್ಥ್ಯಸ್ಥಿತಿಗೆ ಸಮಾಧಿಯೆಂದೆನ್ನ ಕೂಡದು. ಅಕಸ್ಮಾತ್ತಾಗಿ ದಿವ್ಯರೂಪವನ್ನು ಕಂಡರೆ, ಅಥವಾ ಅಪರೂಪ ವಸ್ತುಗಳನ್ನು ನೋಡಿ ಆಶ್ಚರ್ಯಚಕಿತರಾದರೆ, ಅಲ್ಲಿ ತಟಸ್ಥತೆ ಬರುವದು; ಆದರೆ ಅದೊಂದು ವೃತ್ತಿಯೇ ಹೊರತು ಅದು ಸಮಾಧಿಯೆಂದೆನಿಸಿಕೊಳ್ಳುವದಿಲ್ಲ. ಪ್ರಥಮದೃಷ್ಟಿಯಲ್ಲಿ ಸ್ವಸ್ವರೂಪವನ್ನು ಕಂಡಕೂಡಲೆ ವಿಸ್ಮಯವು ಹುಟ್ಟುವದು; ಆದರೆ ಅದನ್ನು ಪಚನಮಾಡಿಕೊಂಡು, ಕೇವಲ ಸ್ವರೂಪದಲ್ಲಿ ಐಕ್ಯವಾಗುವ ಸ್ಥಿತಿಯೇ ಸಮಾಧಿಯು, ಎಲ್ಲಿ ಬ್ರಹ್ಮಪ್ರಾಪ್ತಿಯಾಗುವದೋ ಅಲ್ಲಿ ದೇಹಸ್ಫುರಣವಾಗಲಾರದು. ಆಗ ಅವನು ತಟಸ್ಥನಿರುವನೋ, ಅಥವಾ ಚಲನಮಾಡುವನೋ ಎಂಬದನ್ನು ನೋಡುವದು ಎರಡನೆಯವರ ಕಡೆಗೆ ಇರುತ್ತದೆ. ಹೀಗೆ ದೇಹವೇ ಮಿಥ್ಯವಾಗಿರಬೇಕಾದರೆ, ಅದರ ಲಕ್ಷಣವನ್ನು ಯಾರು ಲಕ್ಷಿಸುವರು. ಮೃಗಜಲದಲ್ಲಿ ಸ್ನಾನಮಾಡುವದರಿಂದ, ಆತ್ಮಜ್ಞಾನಿಗೆ ಶಾಂತವೃತ್ತಿಯು ಹ್ಯಾಗೆ ಬರುವದು? ಮಿಥ್ಯವಾದ ದೇಹಕ್ಕೆ ತಟಸ್ಥತೆಯು ಬಂದರೆ, ಅದಕ್ಕೆ ಸಮಾಧಿಯ ಅವಸ್ಥೆಯೆನ್ನಬೇಕೆಂಬ ಲಕ್ಷಣದ ಮಾತು ಸತ್ಯವೆಂದು ಮನ್ನಿಸಿದರೆ, ಪರೀಕ್ಷಕರು ನಿಜವಾಗಿ ಮೋಸ ಹೋಗುವರೆಂದು ತಿಳಿಯಬೇಕು. ಸ್ವಪ್ನದೊಳಗಿನ ಆತ್ಮಜ್ಞಾನಿಗೆ ತಾಟಸ್ಥ್ಯಲಕ್ಷಣವು ಬಂದರೆ ಸ್ವಪ್ನದೊಳಗಿನ ಜನರಿಗೆ ಅದು ಮಾನ್ಯವಾಗುವದೇ ಹೊರತು ಆದರೆ ಜಾಗ್ರತಾವಸ್ಥೆಯಲ್ಲಿ ಈ ಅನುಭವವು ಸತ್ಯವಾಗಿ ಎಂದಿಗಾದರೂ ಬರುವದೇನು? ಸ್ವಪ್ನದೊಳಗಿನ ಜನರಿಗೆ ಸ್ವಪ್ನದೊಳಗಿನ ಆತ್ಮಜ್ಞಾನಿಯ ಸಮಾಧಿಯ ಖ್ಯಾತಿಯು ಪ್ರಕಟವಾದರೂ ಜಾಗ್ರತಾವಸ್ಥೆಯಲ್ಲಿ ಅವನು ಬಂದಬಳಿಕ ಅವನಿಗೆ ಇದರ ಅನುಭವವು ಎಂದಿಗೂ

ಬರುವದಿಲ್ಲ. ಅವನು ಮೇಲಿನ ಸಮಾಧಿಯ ಲಕ್ಷಣಗಳು ನಿಜವೆಂದು ತಿಳಿದರೆ ಅವನು ನಿಶ್ಚಯವಾಗಿ ನಿದ್ದೆಯಲ್ಲಿರುವನೆಂದು ತಿಳಿಯಬೇಕು. ಇದರಂತೆ ತಾಟಸ್ಥ್ಯಕ್ಕೆ ಸಮಾಧಿಯೆಂದೆನ್ನುವದು ಅವಿದ್ಯೆಯೊಳಗಿನ ಮಾತೇ ಸರಿ. ಅದು ಕೇವಲ ಸ್ವಪ್ನಮೂರ್ಛಾಸಿದ್ಧಿಯು; ಆದರೆ ಸ್ವಸ್ವರೂಪವನ್ನು ತಿಳಿಯುವದಕ್ಕೆ ಅವನು ಎಚ್ಚರವಾಗಲಿಲ್ಲ. ಅವನು ಎಚ್ಚತ್ತು ಸ್ವಪ್ನವನ್ನು ನೋಡುತ್ತಾನೆ, ಸ್ವಪ್ನದೊಳಗಿನದೆಲ್ಲ ಮಿಥ್ಯವಾಗಿ ಅವನಿಗೆ ಕಾಣುವದು. ಆದರೊಳಗೆ ಅವನ ಸ್ವಪ್ನದೇಹವೇ ಮೊದಲು ಸತ್ಯವಲ್ಲ. ಇನ್ನು ಅಂಥ ದೇಹಧಾರಿಗೆ ತಾಟಸ್ಥ್ಯ ಲಕ್ಷಣ ಬಂದಿರುವದೆಂಬದು ದೂರಕೋಪಾಸ್ತವೇ ಸರಿ. ನಿಜವಾಗಿ ಎಚ್ಚರಿಕೆಯಾಗಿ ಜಾಗೃತಿಯಲ್ಲಿ ಸ್ವಪ್ನದೇಹಕ್ಕೆ ತಟಸ್ಥತೆಯನ್ನು ಪ್ರಯತ್ನ ಪೂರ್ವಕವಾಗಿ ಹಚ್ಚಲಿಕ್ಕೆ ಹೋಗಲು ಅವನಿಗೆ ನಾಚಿಕೆ ಬರುವದು. ಆದರೂ ಹೆಚ್ಚಿನ ಸ್ಥಿತಿಯು ಅವನ ಮನಸ್ಸಿನಲ್ಲಿ ಬರುವದಿಲ್ಲ. ಯಾವನು ಎಚ್ಚತ್ತು ಸ್ವಪ್ನವನ್ನು ಹೇಳುವನೋ, ಅವನ ಮಾತೆಲ್ಲ ಸುಳ್ಳು ಎಂದು ತಿಳಿಯಬೇಕು. ಆದರೂ ಸತ್ಯವೆಂದು ತಿಳಿದಾಗ್ಯೂ ಅದು ಎಂದಿಗೂ ಮೈಗೆ ಮುಟ್ಟುವದಿಲ್ಲ.

ಇದರಂತೆ ಪರಬ್ರಹ್ಮವಸ್ತುವು ನಿಜವಾಗಿ ಪ್ರಾಪ್ತವಾದಾಗ, ದೇಹಸ್ಥಿತಿಯು ಅದನ್ನು ಮುಟ್ಟುವದಿಲ್ಲ; ಮತ್ತು ದೇಹಸ್ಥಿತಿಗೆ ಅದರ ಸಂಸರ್ಗವಾಗುವದಿಲ್ಲ. ಆದರೆ ದೇಹವು ಪ್ರಾರಬ್ಧ ಶೇಷದಿಂದ ವರ್ತಿಸುವದು. ಸ್ಥಂಡಿಲದೊಳಗಿನ ಅಗ್ನಿಯು ನಂದಿಹೋದರೂ, ಸ್ಥಂಡಿಲದ ಬುಡಕ್ಕಿರುವ ನೆಲದಲ್ಲಿ ಉಷ್ಣತೆಯು ಇದ್ದೇ ಇರುವದು. ಕರ್ಪೂರವು ಸುಟ್ಟುಹೋದರೂ, ಕರ್ಪೂರದ ವಾಸನೆ ಮಾತ್ರ ಆ ಸ್ಥಳದಲ್ಲಿ ಇದ್ದೇ ಇರುವದು. ತೊಟ್ಟಿಲವು ತೂಗಾಡುವಾಗ ಅದರ ತೂಗಾಟವನ್ನು ಒಮ್ಮೆಲೆ ನಿಲ್ಲಿಸಲು ಯತ್ನಿಸಿದರೂ, ಅದು ಪೂರ್ವಸಂಸ್ಕಾರದಿಂದ ತೂಗೇ ತೂಗಾಡುವದು. ಅದರಂತೆ ಅವಿದ್ಯೆಯು ನಾಶವಾದರೂ, ಪ್ರಾರಬ್ಧವು ಉಳಿದೇ ಉಳಿಯುವದು. ಅದರಂತೆ ಮುಕ್ತನ ದೇಹವು ತಿರುಗುವದು. ಬಾಣಗಳಿಂದ ಗುರಿಯನ್ನು ಹೊಡೆದರೂ, ಮೊದಲಿನ ಗತಿಯ ಜೋಲಿಯಿಂದ ದೇಹವು ಮುಂದಕ್ಕೆ ಹೋಗುವದು. ಅದರಂತೆ ಅವಿದ್ಯಾನಾಶವಾದರೂ ಪ್ರಾರಬ್ಧವು ಉಳಿಯುವದು. ಅದರಿಂದ ಮುಕ್ತನ ದೇಹವು ತಿರುಗುವದು. ಶರೀರದ ಯೋಗದಿಂದ ಶರೀರದ ನೆರಳು ಶರೀರವು ತಿರುಗಾಡಿದಂತೆ ನಡೆಯುವದು. ಆದರೂ ಶರೀರವು ಛಾಯೆಯನ್ನು ಬಿಟ್ಟು ಇದೆ. ಅದರಂತೆ ದೇಹವು ಮುಕ್ತನಿಗೆ ಮಿಥ್ಯವಾಗಿಯೇ ಇರುವದು. ಆದರೆ ಅದು ಪ್ರಾರಬ್ಧಯೋಗದಿಂದ ಚಲನ

ವಲನ ಮಾಡುವದು. ಯಾವ ಹೇತುವಿಲ್ಲದೆ ಛಾಯೆಯು ಪುರುಷನ ಸಂಗಡ ಇರುವದು. ಅದರಂತೆ ಆತ್ಮಜ್ಞಾನಿಗೆ ದೇಹವು ಮಿಥ್ಯವಾಗಿ ಇದ್ದರೂ, ಅದು ಪ್ರಾರಬ್ಧದಂತೆ ವರ್ತಿಸುವದು. ಉದುರಿ ಬಿದ್ದ ಎಲೆಗಳು ಗಾಳಿಯಿಂದ ಚಲನ ವಲನ ಮಾಡುವವೋ, ಅದರಂತೆ ಪ್ರಾಚೀನಕರ್ಮಾನುಸಾರವಾಗಿ ದೇಹವು ವರ್ತಿಸುವದು. ಆದರೂ ದೇಹ ಕರ್ಮಗಳು ಜ್ಞಾನಿಗೆ ಸ್ಪರ್ಶಮಾಡಲಾರವು. ಮತ್ತು ಆತ್ಮಜ್ಞಾನಿಯಾದರೂ ಆತ್ಮಸ್ವರೂಪದಿಂದ ಚ್ಯುತನಾಗಲಾರನು. ಆ ಪ್ರಾರಬ್ಧದ ಹೊಟ್ಟೆಯಲ್ಲಿ ಸಕಲ ಜಗತ್ತುಗಳ ಕಾರಭಾರವು ನಡೆಯುವದು. ಸಿದ್ಧಪುರುಷನಾದವನು ಆತ್ಮಜ್ಞಾನಿಯಾಗಲಿ, ಮೌನಧಾರಣ ಮಾಡಿಕೊಂಡು ಗಿರಿ ಗುಹೆಗಳಲ್ಲಿ ಸುಖವಾಗಿ ವಾಸಮಾಡಲಿ, ಅಥವಾ ಅವನು ವಿಧ್ಯುಕ್ತವಾಗಿ ಸಕಲ ಕರ್ಮಗಳ ಆಚರಣೆ ಮಾಡಲಿ, ಅವನು ಪೂರಾ ಹುಚ್ಚನೇ ಆಗಲಿ, ಅಥವಾ ಅವನು ಪಲ್ಲಕ್ಕಿಯಲ್ಲಿ ಕೂಡ್ರಲಿ, ಅಥವಾ ಆನೆಯ ಮೇಲೆ ಏರಲಿ, ಅಥವಾ ಅವನು ಮಲಮೂತ್ರಗಳಲ್ಲಿ ಹೊರಳಾಡುತ್ತ ಬೀಳಲಿ, ಇವೆಲ್ಲ ವ್ಯವಹಾರಗಳು ಪ್ರಾರಬ್ಧದ ಫಲಗಳು.

ಯಾವ ಸ್ಥಿತಿಯಲ್ಲಿ ಬಾಧ್ಯ ಬಾಧಕತೆಗಳು ಕಡಿದು ಹೋಗಿರುವವೋ, ಸಕಲ ಅಹಂಭಾವವೂ ಅವಿದ್ಯಾಸಹಿತವಾಗಿ ಪೂರಾ ನಾಶವಾಗಿ ಹೋಗಿರುವವೋ ಅದಕ್ಕೆ ಸಿದ್ಧಾಂತದಲ್ಲಿ ನಿಜವಾದ ಸಮಾಧಿಯೆಂದೆನ್ನುವರು. ಇದೇ ಸಹಜವಾದ ಸಮಾಧಿ ಅವಸ್ಥೆಯು. ಈ ಅವಸ್ಥೆಯಲ್ಲಿ ಆತ್ಮಜ್ಞಾನಿಯು ಕರ್ಮಗಳ ಭೋಗಗಳನ್ನು ಭೋಗಿಸಿದರೂ, ಅವನು ಅಭೋಕ್ತನಾಗಿರುವನು; ಅವನು ಕರ್ಮಗಳನ್ನು ಮಾಡಿದರೂ ಅಕರ್ತಾರನಾಗಿರುವನು; ಅವನು ಕ್ರಿಯಾಕಾರಣ ಸಂಯೋಗದಿಂದ ಅವನು ತನ್ನ ಸಮಾಧಿಯಲ್ಲಿ ಆನಂದದಿಂದ ತೂಗಾಡುತ್ತಿದ್ದರೂ ವಿಷಯಭೋಗಗಳನ್ನು ನೋಡುವನು. ಆದರೂ ಅವನ ಸಮಾಧಿಮುಕ್ತಿಗೆ ಭಂಗಬರುವದಿಲ್ಲ. ಅವನು ಭೋಗಸಂಗದಿಂದ ಅಲಿಪ್ತನಾಗಿರುವನು. ಈ ಸಮಾಧಿಸ್ಥನಾದ ಆತ್ಮಜ್ಞಾನಿಗೆ ಅವನ ಹೆಂಡತಿಯು ತನ್ನ ಗಂಡನೆಂದು ಕರೆಯುವಳು, ಅವನ ಮಗನು 'ನನ್ನ ತಂದೆ'ಯೆಂದು ಕರೆಯುವನು; ಶಿಷ್ಯನು 'ನನ್ನಸ್ವಾಮಿ'ಯೆಂದು ಅನ್ನುವನು. ಇವರೆಲ್ಲ ಜನರಲ್ಲಿ ಅವನು ಇದ್ದರೂ, ಅವನು ಅಪರೋಕ್ಷಸಾಕ್ಷಾತ್ಕಾರ ಜ್ಞಾನವನ್ನು ಪಡಕೊಂಡಿರುವದರಿಂದ ಅವನು ಎಲ್ಲರಿಂದಲೂ ದೂರದಲ್ಲಿ ಅಲಿಪ್ತಸ್ಥಿತಿಯಲ್ಲಿ ಯಾವ ದೇಹಸಂಬಂಧವನ್ನು ಮೀರಿ ಇರುವನು. ಕಟ್ಟಿಗೆಗಳ ಯೋಗದಿಂದ ಅಗ್ನಿಯ ಉತ್ಪತ್ತಿಯು, ಕಾಷ್ಠಗಳಿಂದ ಅದರ ಸ್ಥಿತಿಯು;

(ಜೀವನವು) ನಡೆಯುವದು. ಅದರಲ್ಲಿ ಬಹಳ ಕಾಷ್ಠಗಳನ್ನು ಹಾಕಲು, ಅದು ಹೆಚ್ಚಾಗಿ ಅದನ್ನು ನಿಗ್ರಹ ಮಾಡಲಿಕ್ಕೆ ಆಗುವದಿಲ್ಲ. ಅಗ್ನಿಯನ್ನು ಊದಲು, ಅದು ಲಖಲಖಾಯಮಾನವಾಗಿ ಉರಿಯುವದು. ಅಗ್ನಿಯನ್ನು ಊದಿದಾಗಲೇ ಅದರಿಂದ ಉರಿಯಾಗಿ ದೀಪವು ಪ್ರಕಟವಾಗುವದು. ಆದರೆ ಬಹಳ ಜೋರಿನಿಂದ ಊದಲು ಗಾಳಿಯನ್ನು ಸಹಿಸಲಾರದೆ ದೀಪವು ಉರಿಯದೆ ನಿಂತುಬಿಡುವದು; ಆದರೆ ನಿರ್ವಾತದಲ್ಲಿ ಮಾತ್ರ ಚನ್ನಾಗಿ ಉರಿಯುವದು. ಇದರಂತೆ ಈ ಆತ್ಮಜ್ಞಾನಿಯಾದ ಮಹಾಯೋಗಿಯ ಉತ್ಪತ್ತಿಯು ಕರ್ಮಗಳಿಂದಲೇ ಇರುವದು. ಕರ್ಮಗಳಿಂದ ಅವನಿಗೆ ಪರಬ್ರಹ್ಮಪ್ರಾಪ್ತಿಯಾಗಿರುವದು. ಈ ಕರ್ಮಗಳಲ್ಲಿಯಾದರೂ ಈ ಮಹಾಯೋಗಿಗಳು ನಿಷ್ಕರ್ಮ ಸ್ಥಿತಿಯಲ್ಲಿ ವರ್ತಿಸುವರು. ಈ ಆತ್ಮಜ್ಞಾನಿಯು ಜನರಲ್ಲಿ ವ್ಯವಹಾರ ಮಾಡುತ್ತಿರಲಿ, ಅವನು ಅರಣ್ಯದಲ್ಲಿ ಹುಚ್ಚುಹಿಡಿದು ಕುಣಿಯಲಿ, ಅಥವಾ ನಿರ್ಜನಪ್ರದೇಶದಲ್ಲಿ ತಟಸ್ಥನಾಗಿ ನಿಲ್ಲಲಿ, ಅವನ ಸ್ಥಿತಿಯು ಅಧಿಕವೂ ಆಗುವದಿಲ್ಲ, ಕಡಿಮೆಯೂ ಆಗುವದಿಲ್ಲ.

ರಾಜನಿಗೆ ಸಿಂಹಾಸನದ ಮೇಲೆ ಕುಳಿತಾಗ ರಾಜ್ಯಪಟ್ಟಾಭಿಷೇಕ ಯೋಗದಿಂದ ರಾಜತ್ವವಂತು ಬಂದೇ ಬರುವದಷ್ಟೇ. ಈ ರಾಜತ್ವವು ಅವನು ಅರಣ್ಯದಲ್ಲಿ ಆಡಬೇಕಾದರೂ ಹೋಗುವದಿಲ್ಲ. ಆವಾಗಲೂ ಅವನಿಗೆ ರಾಜನೆಂತಲೇ ಅನ್ನುವರು. ಅವನು ಕ್ರೀಡೆಯನ್ನು ಮಾಡಲಿ ಅಥವಾ ಬೇಟೆಯಾಡಲಿಕ್ಕೆ ಹೋಗಲಿ, ಅವನ ರಾಜಪದಕ್ಕೆ ಚ್ಯುತಿಯು ಬರುವದಿಲ್ಲ. ರಾಜನು ಅರಣ್ಯದಲ್ಲಿ ವಾಸಮಾಡಲು, ಅದಕ್ಕೆ ರಾಜ್ಯಭೋಗವು ಒರುವದು. ವನದಲ್ಲಿ ರಾಜನು ಹೋಗಿ ಇರಲು, ಅವನ ರಾಜತ್ವವು ಮುಳುಗಿ ಹೋಗುತ್ತದೆಂಬ ಮಾತನ್ನು ಮೂರ್ಖರೂ ಕೂಡ ಹೇಳಲಾರರು. ಇದರಂತೆ ಸ್ವಸ್ವರೂಪ ಪ್ರಾಪ್ತಿಯನ್ನು ಪಡೆದ ಆತ್ಮಯೋಗಿಯು, ಪ್ರಾರಬ್ಧಸ್ಥಿತಿಯಿಂದ ನಾನಾಕರ್ಮಗಳನ್ನು ಮಾಡುತ್ತಾನೆಂದು ಕಂಡರೂ, ಅವನ ನಿಜಾತ್ಮಸ್ಥಿತಿಯ ಭಂಗವು ಎಂದಿಗೂ ಆಗಲಾರದು; ಆದ್ದರಿಂದ ಸಮಾಧಿ, ಹಾಗು ಸಮಾಧಿವಿಸರ್ಜನ ಇವೆರಡು ಅವಸ್ಥೆಗಳ ಲಕ್ಷಣಗಳು ಅಪರಿಪಕ್ವಮತಿಯುಳ್ಳ ಅಜ್ಞಾನಿಗಳಿಗೆ ಮಾತ್ರ ಸಂಭವಿಸುವವು. ಪರಿಪಾಲನ ಸ್ಥಿತಿಯಲ್ಲಿದ್ದ ಆತ್ಮಜ್ಞಾನಿಗಳಿಗೆ ಆ ಲಕ್ಷಣಗಳೇ ಇರುವದಿಲ್ಲ. ಪರಿಪೂರ್ಣ ಆತ್ಮಜ್ಞಾನಿಗೆ ಆತ್ಮಸ್ವರೂಪದ ಹೊರತು ಅನ್ಯವಸ್ತುವೇ ಕಾಣುವದಿಲ್ಲ. ಸಮಾಧಿವ್ಯುತ್ಥಾನಗಳು ಇವನ ಮುಂದೆ ತಮ್ಮ ಮೋರೆಗಳನ್ನು ತೋರಿಸಲು ನಾಚುವವು. ಕೃಷ್ಣನು ಅರ್ಜುನನಿಗೆ ಸಮಾಧಿಯನ್ನು ಕೊಳ್ಳು, ಅವನನ್ನು ಕೂಡಲೆ ಮಹಾ